ಕಾಯಕವೇ ಕೈಲಾಸ



# ಸಿದ್ಧಗಂಗಾ



## ಸುವರ್ಣ ಮಹೋತ್ಸವ ವರ್ಷ

ಸಂಪುಟ : ೫೦ ನವೆಂಬರ್ ೨೦೧೪ ಸಂಚಿಕೆ : ೧೧




ತುಮಕೂರು ಶ್ರೀ ಸಿದ್ಧಗಂಗಾಮಠದಲ್ಲಿ ದಿನಾಂಕ ೧೧-೧೧-೨೦೧೪ ದಂದು ವಿಶ್ವ ಹಿಂದೂ ಪರಿಷತ್ ಸ್ವರ್ಣ ಜಯಂತಿಯಲ್ಲಿ ಸಂತರ ಸಮ್ಮೇಳನದ ಉದ್ಘಾಟನಾ ಕಾರ್ಯಕ್ರಮದ ದಿವ್ಯಸಾನ್ನಿಧ್ಯವನ್ನು ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ವಹಿಸಿದ್ದರು - ಉಡುಪಿ ಪೇಜಾವರ ಮಠದ ಶ್ರೀ ವಿಶ್ವೇಶ್ವತೀರ್ಥ ಸ್ವಾಮೀಜಿ, ಆರ್ಟ್ ಆಫ್ ಲಿವಿಂಗ್‌ನ ಶ್ರೀ ರವಿಶಂಕರ ಗುರೂಜಿ, ಸುತ್ತೂರು ಮಠದ ಶ್ರೀ ಶಿವರಾತ್ರಿ ದೇಶೀಕೇಂದ್ರ ಸ್ವಾಮೀಜಿ, ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಸರಸಂಘ ಚಾಲಕ ಶ್ರೀ ಮೋಹನ್ ಭಾಗವತ್, ಆದಿಚುಂಚನಗಿರಿ ಮಠಾಧೀಶ ಶ್ರೀ ನಿರ್ಮಲಾನಂದ ಸ್ವಾಮೀಜಿ ಭಾಗವಹಿಸಿದ್ದರು.



ವಿಶ್ವ ಹಿಂದೂ ಪರಿಷತ್ ಸಹಯೋಗದಲ್ಲಿ ಆಯೋಜಿಸಿದ್ದ ಸಂತ ಸಮ್ಮೇಳನದಲ್ಲಿ ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಮಾತನಾಡುತ್ತಿರುವುದು.



ಶ್ರೀ ಸಿದ್ಧಗಂಗಾಮಠದಲ್ಲಿ ದಿನಾಂಕ ೧೧-೧೧-೨೦೧೪ರ ಮಂಗಳವಾರದಂದು ವಿಶ್ವ ಹಿಂದೂ ಪರಿಷತ್ ಸ್ವರ್ಣ ಜಯಂತಿ ಪ್ರಯುಕ್ತ ಹಮ್ಮಿಕೊಂಡಿದ್ದ ಸಂತರ ಸಮ್ಮೇಳನದಲ್ಲಿ ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಸರಸಂಚಾಲಕ ಶ್ರೀ ಮೋಹನ್‌ರಾವ್ ಭಾಗವತ್. ದಿಕ್ಸೂಚಿ ಭಾಷಣ ಮಾಡುತ್ತಿರುವುದು.



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ: ೫೦ ನವೆಂಬರ್ ೨೦೧೮ ಸಂಚಿಕೆ: ೧೧

## ಒಳಪುಟಗಳಲ್ಲಿ ......................




ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕ:
ಹೆಚ್.ಬಿ. ಗಂಗಾಧರಯ್ಯ

ವಿತರಣೆ :
ಆರ್.ಎಸ್. ಮಲ್ಲೇಶಪ್ಪ

ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ


ಚಂದಾ ವಿವರ : ವಾರ್ಷಿಕ ಚಂದಾ ರೂ. 200/-
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 12.00

# ನಿಜವಾದ ದೀಪಾವಳಿ

ಸಂ ಪಾ ದ ಕೀ ಯ

**ಕ**ರ್ನಾಟಕದ ಏಕೀಕರಣಕ್ಕಾಗಿ ದುಡಿದ ಮಹನೀಯರ ಸ್ಮರಣೆಯ ದಿನ. **1956 ಕನ್ನಡನಾಡು** ಉದಯವಾಯಿತು. ವಿಶಾಲ ಮೈಸೂರೆಂದು ಹೆಸರಾಯಿತು. ತದನಂತರ ಕರ್ನಾಟಕ ಎಂದು ನಾಮಾಂಕಿತಗೊಂಡಿತು. ರಾಜ್ಯವನ್ನಾಳಿದರೆಲ್ಲ 'ಕನ್ನಡ'ದ ಅಭಿವೃದ್ಧಿಗೆ ಶ್ರಮಿಸಿದ್ದಾರೆ; ಶ್ರಮಿಸುತ್ತಿದ್ದಾರೆ. ಸರ್ಕಾರ ಕನ್ನಡದ ನೆಲ, ಜಲ, ಜನ, ಭಾಷೆಗಾಗಿ ಏಕ ಮನಸ್ಸಿನಿಂದ ದುಡಿಯುತ್ತಿದೆ. 'ಕನ್ನಡ'ವನ್ನು ಮಂತ್ರವನ್ನಾಗಿಸಿಕೊಂಡ ಧರ್ಮಪೀಠಗಳು, ಸಂಘಸಂಸ್ಥೆಗಳು, ವಿದ್ಯಾಲಯಗಳು ನಿತ್ಯಕಟಿಬದ್ಧವಾಗಿವೆ. ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ವಿಶ್ವವಿದ್ಯಾಲಯ, ಕನ್ನಡ ರಕ್ಷಣಾಪಡೆ ಮುಂತಾದುವುಗಳು ಸ್ಮರಣೀಯ ಸೇವೆ ಸಲ್ಲಿಸುತ್ತಿವೆ. ಕನ್ನಡದ ಜೀವ ಜೀವಾಳವಾಗಿರುವ **'ಜಾನಪದ ವಿಶ್ವವಿದ್ಯಾಲಯ'** ಮುನ್ನಡೆದಿದೆ. ಕನ್ನಡ ನಿಘಂಟುಗಳು ಪ್ರಕಾಶನಗೊಂಡಿವೆ. ಇತ್ತೀಚೆಗೆ 'ವಚನಪದಸಂಪದ' -ತ್ರಿಭಾಷಾ ನಿಘಂಟು ಹೊರಬಂದಿದೆ. **'ಇಕೋ ಕನ್ನಡ'** ಕೋಶ ಬಂದಿದೆ. ಪತ್ರಿಕೆಗಳಂತೂ ಕನ್ನಡ ಭಾಷಾ ವೈವಿಧ್ಯವನ್ನು ಬೆಳವಣಿಗೆಯನ್ನು ಅಭಿವೃದ್ಧಿಗೊಳಿಸುತ್ತಿವೆ. ಪ್ರಮುಖ ನಗರಗಳ ಅಂಗ್ಲೀಕರಣಗೊಂಡ ಹೆಸರುಗಳು ಅಚ್ಚ ದೇಶೀಯವಾಗುತ್ತಿವೆ. ಮೊನ್ನೆ ತಾನೆ ಸರ್ಕಾರ ಬೆಳಗಾಂ-ಬೆಳಗಾವಿ, ಬ್ಯಾಂಗಲೂರ್-ಬೆಂಗಳೂರು, ತುಮಕೂರ್-ತುಮಕೂರು, ಚಿತ್ರದುರ್ಗ್ -ಚಿತ್ರದುರ್ಗ ಎಂದು ಪರಿಶುದ್ಧಗೊಳಿಸಿ ಅಭಿಮಾನವನ್ನು ವ್ಯಕ್ತಪಡಿಸಿದೆ. ನಗರ, ಪಟ್ಟಣಗಳಿಗಿಂತ ಹಳ್ಳಿಗಳಲ್ಲಿ ಕನ್ನಡ ನುಡಿಯ ಸೊಗಡು, ಬೆಡಗು ಎದ್ದು ಕಾಣುತ್ತಿದೆ. ಕನ್ನಡ ಸಂಘಗಳು ದುಡಿಯುತ್ತಿವೆ. **'ಕನ್ನಡನುಡಿ'** ಸಾಹಿತ್ಯಪರಿಷತ್ತಿನಿಂದ ಪ್ರಕಟವಾಗುತ್ತಿದೆ. **'ಕನ್ನಡ ಪಂಡಿತ ಕಾಲೇಜು'** ಶ್ರೀಮಠದಿಂದ ಸೇವಾಮುಖಿಯಾಗಿ ಮುನ್ನಡೆದಿದೆ. ಪೂಜ್ಯ ಶ್ರೀಶ್ರೀಗಳವರ ಕನ್ನಡಾಭಿಮಾನದ ತಾಯಿಬೇರು ಇದಾಗಿದೆ.

ನವೆಂಬರ್ 14 ಮಕ್ಕಳ ದಿನಾಚರಣೆ. ಪಂಡಿತ ಜವಹರಲಾಲ್‌ರ ಜನ್ಮದಿನ. **'ಮನುಜನಿಗೆ ಮಗು ತಂದೆ'** ಎಂದು ನಂಬಿದವರು ನೆಹರೂ ಅವರು. ಮಕ್ಕಳು ರಾಷ್ಟ್ರದ ಅಮೂಲ್ಯ ಸಂಪತ್ತು. ಅವರನ್ನು ಸುಶಿಕ್ಷಿತರನ್ನಾಗಿಸುವ ರಾಷ್ಟ್ರಾಭಿಮಾನಿಗಳನ್ನಾಗಿಸುವ ಪವಿತ್ರ ದಿನ. ಇಂದಿನ ಮಕ್ಕಳೇ ನಾಳೆಯ ಪ್ರಜೆಗಳು ಎಂಬುದನ್ನು ಮರೆಯಬಾರದು. ಅವರು **'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ'** – ಎಂಬ ಭಾವನೆಯಿಂದ ಅರಳುವಂತಾಗಬೇಕು.

**'ದೀಪಾವಳಿ'**– ಬೆಳಕಿನ ಹಬ್ಬ, ಪಟಾಕಿ ಸುಡುವ ಸಂಭ್ರಮ. ನರಕಾಸುರನನ್ನು ಸಂಹರಿಸಿದ ದಿನ. ಹೌದು, ನಮ್ಮೊಳಗೆ ದೀಪಾವಳಿಯಾಗಬೇಕು, ಕವಿದಿರುವ ಅನಂತರೂಪದ ಕತ್ತಲೆ ಕಳೆದುಹೋಗಬೇಕು. ದುರ್ಗುಣಗಳ ಪಟಾಕಿ ಸುಡುವುದಾಗಬೇಕು. ಒಬ್ಬೊಬ್ಬರೂ ನರಕಾಸುರರಾಗಿದ್ದೇವಲ್ಲಾ ಎಂಬ ಅರಿವುಳ್ಳವರಾಗಬೇಕು. ಅವನ ಧ್ವಂಸಕ್ಕಾಗಿ ತ್ರಿಕರಣಶುದ್ಧಿಯಿಂದ ಶ್ರಮಿಸಬೇಕು. **'ಲೋಕದಡೊಂಕು'** ತಿದ್ದುವುದಕ್ಕೆ ಮೊದಲು ನಮ್ಮನಮ್ಮೊಳಗಿರುವ ಅಂಕುಡೊಂಕುಗಳನ್ನು ನೇರಪಡಿಸಿಕೊಳ್ಳಬೇಕು. ಅದೇ ನಿಜವಾದ ದೀಪಾವಳಿ.

'ಸಿದ್ಧಗಂಗಾ' ದೀಪಾವಳಿ ಹಬ್ಬದ ಶುಭಾಶಯಗಳನ್ನು ಎಲ್ಲರಿಗೆ ಕೋರುತ್ತದೆ.

*–ಸಂಪಾದಕ*







ಶ್ರೀ ವಾ ಣಿ

## ಸಾಹಿತ್ಯ

**ಮ**ನುಷ್ಯ ಸಾಹಿತ್ಯ ಪ್ರೇಮವುಳ್ಳವನಾಗಬೇಕು. ಸಾಹಿತ್ಯ ಜೀವನಕ್ಕೆ ಆನಂದ ಕೊಡುವುದು, ಒಲವು ಕೊಡುವುದು. ಸಾಮಾನ್ಯ ಜನರ ಯೋಗಸಾಧನೆಯ ಸುಲಭ ಮಾರ್ಗ ಸಾಹಿತ್ಯ. ಸಾಹಿತ್ಯವೆಂದರೆ ಅಶ್ಲೀಲ ಸಾಹಿತ್ಯವಲ್ಲ, ಉದಾತ್ತ ವಸ್ತುವನ್ನೊಳಗೊಂಡ ಸದ್ಗ್ರಂಥಗಳು ಎಂದರ್ಥ. ನಮ್ಮ ದೇಶದಲ್ಲಿ ಪ್ರತಿಭಾವಂತ ಕವಿಗಳು ಆಗಿ ಹೋಗಿದ್ದಾರೆ. ಹಿಂದಿನ ಕಾಲದ ಉದ್ದಾಮ ಸಾಹಿತಿಗಳ ಸಂಖ್ಯೆಗೂ ಇಂದಿನ ಸಾಹಿತಿಗಳ ಸಂಖ್ಯೆಗೂ ಹೋಲಿಸಿದರೆ ನಿರಾಶೆಯಾಗದಿರದು.

ಸಾಹಿತ್ಯ ಕ್ಷೇತ್ರದಲ್ಲಿಯೂ ಇತ್ತೀಚೆಗೆ ಜಾತಿ, ಮತ, ಪಂಗಡಗಳ ರಾಜಕೀಯ ತಲೆ ಹಾಕಿ ಕಲುಷಿತ ವಾತಾವರಣ ಏರ್ಪಟ್ಟಿರುವುದು ತುಂಬಿ ಶೋಚನೀಯವಾದ ಅಂಶ. ಸಾಹಿತ್ಯವೂ ದೇಶ ಕಟ್ಟುವುದರಲ್ಲಿ ಒಂದು ಮೈಲಿಗಲ್ಲು ಎಂಬುದನ್ನು ನಾವು ಮರೆಯಬಾರದು.

*(ಕೃಪೆ: ಸಿದ್ಧಗಂಗೆಯ ಶಿವನಿಧಿ – ದೇಜಗೌ–ಪುಟ 253–3)*

## ದೃಷ್ಟಿ–ಸೃಷ್ಟಿ

'ಹೆಣ್ಣು ಹೊನ್ನು ಮಣ್ಣು' ಮಹಾಜೀವನಕ್ಕೆ ಕುತ್ತು ಎನ್ನುತ್ತಾರೆ. ಬಾಳನ್ನೇ ಹಾಳು ಮಾಡುತ್ತದೆ ಎನ್ನುತ್ತಾರೆ. ಆದರೆ ಹೊನ್ನು ಸರ್ವ ಅರ್ಥಕ್ಕೂ ಸಾಧಕ. ಹೆಣ್ಣು ಮಾತೃಸ್ವರೂಪಿ. ಮಣ್ಣು ಭೂಮಿಗೆ ಆಧಾರ. ಮನುಷ್ಯನ ವ್ಯವಹಾರಕ್ಕೆ ಮೂರೂ ಬೇಕು. ಅವನ್ನು ತಿರಸ್ಕಾರ ಮಾಡುವ ಅಗತ್ಯವಿಲ್ಲ. ಮೂರು ವಸ್ತುಗಳನ್ನು ನೋಡುವ ದೃಷ್ಟಿ ಪವಿತ್ರವಾದರೆ, ಬಳಸುವ ಭಾವ ಶುದ್ಧವಾದರೆ, ಮೂರೂ ಜೀವನಕ್ಕೆ ಸಾಧಕ. ಮೂರೂ ಪರಮಾತ್ಮನೆಡೆಗೆ ಕೊಂಡೊಯ್ಯುತ್ತವೆ. ಸೃಷ್ಟಿಯ ಚಾಲನೆಗೆ ಇವು ಮೂರೂ ಅನಿವಾರ್ಯ. ಇವು ಶಿವನ ಪ್ರಸಾದಗಳಾದ್ದರಿಂದ ಇವುಗಳ ತಿರಸ್ಕಾರ ದೈವದ್ರೋಹವಾಗುತ್ತದೆ.

*(ಕೃಪೆ: ಸಿದ್ಧಗಂಗೆಯ ಶಿವನಿಧಿ – ದೇಜಗೌ–ಪುಟ 254)*

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

*ದೇಹವ್ವಿ ಮರೆಗೊಂಡಿಪ್ಪ ಆತ್ಮದಂತೆ*
*ಶಕ್ತಿಯ ಮರೆಗೊಂಡಿಪ್ಪ ಶಿವನಂತೆ*
*ಕ್ಷೀರವ ಮರೆಗೊಂಡಿಪ್ಪ ತುಪ್ಪದಂತೆ*
*ವಾಚ್ಯವ ಮರೆಗೊಂಡಿಪ್ಪ ನಿರ್ವಾಚ್ಯದಂತೆ*
*ಲೋಕಾರ್ಥದೊಳಗಡಗಿರ್ಪ ಪರಮಾರ್ಥದಂತೆ*
*ಎನ್ನಾತ್ಮದೊಳಗಡಗಿರ್ದ ಪರಮಾರ್ಥ ತತ್ವವು*
*ಬೀಜದೊಳಗಡಗಿರ್ಪ ವೃಕ್ಷದಂತೆ ಇದ್ದಿತಯ್ಯಾ*
*ನಾನರಿಯದ ಮುನ್ನ ನನ್ನೊಳಡಗಿದ್ದಿತ್ತಯ್ಯಾ*
*ಶರಣಲಿಂಗಸಂಬಂಧ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ*

ಶರೀರವನು ಆಲಯವ ಮಾಡಿಕೊಂಡಿರುವ ಜೀವಾತ್ಮನಂತೆ, ಶಕ್ತಿಪೀಠವನು ಆಲಯವ ಮಾಡಿಕೊಂಡಿರುವ ಲಿಂಗದ ಹಾಗೆ, ಹಾಲನ್ನು ಆಲಯವ ಮಾಡಿಕೊಂಡಿರುವ ಘೃತದಂತೆ, ಶಬ್ದವನು ಆಲಯ ಮಾಡಿಕೊಂಡಿರುವ ನಿಃಶಬ್ದದಂತೆ, ಲೋಕಪ್ರಪಂಚಿನಲ್ಲಿ ಲೀನವಾಗಿರುವ ಯತಾರ್ಥದಹಾಗೆ, ಹೃದಯದಲ್ಲಿ ಲೀನವಾಗಿರುವ ಪ್ರಾಣಲಿಂಗವು ಸೂಕ್ಷ್ಮವಾದ ಆಲದಬೀಜದಲ್ಲಿ ಶಾಖೋಪಶಾಖೆಯನ್ನುಳ್ಳ ವೃಕ್ಷದ ಹಾಗೆ, ಅಂತರಂಗದಲ್ಲಿ ಪ್ರಾಣಲಿಂಗವಾಗಿ ನೆಲೆಗೊಂಡಿದ್ದಿತ್ತಯ್ಯಾ ಸದ್ರೂಪವಾದ ಶರಣ ಚಿದ್ರೂಪವಾದ ಲಿಂಗದ ಸ್ವಾಯತವು ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ವಿಪರೀತ ನಿಲವಿನ ಅಪರಿಮಿತ ಚೆಲುವನೆ
ತಪವ ದಾಸೋಹದಿ ನಡೆಸಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಸ್ಸೀಮ ಜಂಗಮನೆ ನಿರ್ದೋಷಿ ಜಂಗಮನೆ
ನಿರುಪಾಧಿಕ ಜಂಗಮ ಪುಂಗವನೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಡೆಯೆಲ್ಲ ಆಗಮ ನುಡಿಯೆಲ್ಲ ಅಮೃತ
ಮನವು ಮಹಾಮನೆ ಆಗಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಸ್ಮ ಶಿವಸುಂದರ ಭಸ್ಮದ ಸಿರಿವಂತ
ಭಸ್ಮಭೂಷಿತ ಶಿವಮಂಗಳ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪಂಚಾಚಾರದ ಪರಮಪಾವನಚರಿತ
ನೀನೊಕ್ಕದನಿಕ್ಕಿ ಸಲಹೆನ್ನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪರುಷನೀನಾಗಿರುವೆ ಲೋಹ ನಾನಾಗಿರುವೆ
ಪರುಷಮುಟ್ಟಿದಲೋಹವಾಗುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಿವಕಲೆಯನರಿತಿರುವ ಶಿವಶಿಲ್ಪಿ ನನ್ನ ಗುರುವೆ
ಶಿವಬೆಳಕ ಚೆಲ್ಲಿರುವೆ ಎಲ್ಲೆಡೆಗೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪರಧನವಪರಸತಿಯ ಮುಟ್ಟದಿರುವನೆ ಶರಣ
ಪರಹಿಂಸೆಯ ನೆಸಗದನೆ ಶಿವಶರಣ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಂಜುನಾಥನು ನೀನೆ ಗೋಕರ್ಣ ಶಿವನೀನೆ
ಹೊಯ್ಸಳೇಶ್ವರ ನೀನೆ ನನ್ನ ತಂದೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶರಣ ಸಮತೆಯ ನಿಧಿಯೆ ಭಕ್ತಿಯ ಬೆಳೆಸಿರಿಯೆ
ಮುಕ್ತಿಯ ತವನಿಧಿಯೆ ನನ್ನ ತಂದೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







# ಭಗವಚ್ಚಿಂತನ
# ಅಭಿಮಾನಗ್ರಸ್ತ-ಶೋಕಹತ!

-ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ದೇವನು 'ತತ್ತ್ವ'; ಎಲ್ಲದರ ಅಂತರಂಗದಲ್ಲಿ, ಹಾಸಿ-ಹರವಿದ ತಥ್ಯ. ಅದನ್ನು ಒಳಗೂ ಹೊರಗೂ ಕಂಡವರು ಸಂತರು, ಶರಣರು. ಅಖಂಡದ ಪರಿದರ್ಶನ ಅವರಿಗೆ, ಭೇದ ಕೇವಲ ಮೇಲೆ ಮೇಲೆ! ಕೇವಲ ತೋರಿಕೆಯಲ್ಲಿ! ನಾವು ಹಾಗಲ್ಲ. ಸತ್ಯವರಿಯದ ನಮ್ಮ ಕಣ್ಣಿಗೆ, ಮನಸ್ಸಿಗೆ ಬರಿ ಭೇದ ಕಾಣುತ್ತಿದೆ. ಉದಾ: ಈ ದೇಹ ನಮ್ಮದೇ. ಇದರ ಅಣು ಅಣುಗಳಲ್ಲಿ ನಾವು! ಆದರೇನು? ಬಲಗಾಲು ಶ್ರೇಷ್ಠ! ಎಡಗಾಲು ಕನಿಷ್ಠ! ಬಲಗಾಲು ಮುಂದಿಟ್ಟರೆ ಶುಭ, ಎಡಗಾಲು ಮುಂದಿಟ್ಟರೆ ಅಶುಭ! ಎಲ್ಲವೂ ನಾನೇ; ನನ್ನದೇ. ಹೀಗಿದ್ದೂ ಶುಭಾಶುಭ ಭೇದ? ಭೇದ ನಮ್ಮನ್ನು ಭೇದಿಸಿದೆ. ಅದು ಬದುಕನ್ನು ವಿಚ್ಛಿನ್ನಗೊಳಿಸಿದೆ. ತಲೆ ನಮ್ಮದು. ತಲೆಗೂದಲೂ ನಮ್ಮದೇ; ಕರಿಯಾದರೇನು? ಬಿಳಿಯಾದರೇನು? ಬಿಳಿಗೂದಲನ್ನು ತಿರಸ್ಕಾರದಿಂದ ಕಾಣುವುದೇಕೆ? ಕರಿಯ ಮಧ್ಯ ಒಂದು ಬಿಳಿ ಕಂಡಾಗ ಕಿತ್ತುಹಾಕುವುದೇಕೆ? ನಮ್ಮ ದೇಹದಲ್ಲಿಯೇ ಇಷ್ಟು ಭೇದ ಮಾಡುವ ನಾವು ಹೊರ ಜಗತ್ತಿನಲ್ಲಿ ಅದೆಷ್ಟು ಭೇದ ಮಾಡಬೇಡ? ದಿನಗಳೆಲ್ಲ ಸೂರ್ಯನವು. ಅವುಗಳಲ್ಲಿಯೇ ವ್ಯತ್ಯಾಸ ನಮಗೆ, ಒಂದು ದಿನ ಶುಭ; ಒಂದು ದಿನ ಅಶುಭ.

ವೈವಿಧ್ಯಪೂರ್ಣವಾಗಿ ಕಾಣುವ ವಿಶ್ವದಲ್ಲಿ ಮೂಲ ವಸ್ತುವೊಂದಿದೆ. ಅದನ್ನು ಗಮನಿಸಿದರೆ ಅಖಂಡತೆಯ ಅಭೇದದ ದರ್ಶನ. ಅಭೇದದ ದರ್ಶನ. ಅಭೇದದ ದರ್ಶನವಾದ ನಂತರ ಭೇದ ಕಾಣಿಸದೆಂದಲ್ಲ. ಕಂಡರೂ ಅದು ತೋರಿಕೆಯದು; ಆಂತರಿಕವಾಗಿ ಇಲ್ಲ ಎನ್ನುವುದು ದಾರ್ಶನಿಕನಿಗೆ ಖಚಿತವಾಗುತ್ತದೆ. ವಿಜ್ಞಾನಿಗೆ ಹೈಡ್ರೋಜನ್, ಆಕ್ಸಿಜನ್, ಕಾರ್ಬನ್ ಬೇರೆ ಬೇರೆಯಾಗಿಯೇ ಕಾಣಿಸುತ್ತದೆ. ಆದರೆ ಇವೆಲ್ಲದರ ಮಹಾಮೂಲಶಕ್ತಿ ಒಂದು ಎನ್ನುವುದು ಅವನಿಗೆ ಸದಾ ಜ್ಞಾಪಕದಲ್ಲಿರುತ್ತದೆ. ಗೊತ್ತಿದ್ದೂ ಭೇದ ಕಾಣುವುದು ಬೇರೆ, ಗೊತ್ತಿಲ್ಲದೆ ಭೇದ ಕಾಣುವುದು ಬೇರೆ. ಹಾಗೆ ವಿಶ್ವದ ಮೂಲವಸ್ತುವನ್ನು ಕಂಡ ಶರಣರು, ಸಂತರು, ಮಹಂತರು ಅನಂತತೆಯನ್ನು ಕಾಣುತ್ತಾರೆ. ಮೂಲವಸ್ತುವನ್ನು ಕಾಣುತ್ತಾರೆ, ಆ ಮೂಲ ವಸ್ತುವಿನೊಳಗೆ ನಾನಿಲ್ಲ, ನೀವೂ ಇಲ್ಲ!

*ತನು ನಷ್ಟ, ಮನ ನಷ್ಟ, ನೆನಹು ನಷ್ಟ*
*ಭಾವ ನಷ್ಟ, ಜ್ಞಾನ ನಷ್ಟ – ಇಂತೀ*
*ಪಂಚನಷ್ಟದೊಳಗೆ ನಾ ನಷ್ಟವಾದೆನು*
*ಈ ನಷ್ಟದೊಳಗೆ ನೀ ನಷ್ಟವಾದೆ*
*ಕಲಿದೇವರ ದೇವಾ ಎಂಬ ನುಡಿ*
*'ನಿಃಶಬ್ದಂ ಬ್ರಹ್ಮ ಉಚ್ಯತೇ'* ಎನ್ನುತ್ತಿದ್ದಿತು.

ತನು ಭಾವ, ಮನ ಭಾವ, ಬುದ್ಧಿಯ ಭಾವ ಅಡಗಿದ ಬಳಿಕ ನಾನು ಎನ್ನುವ ಕಲ್ಪನೆ ಅಡಗುತ್ತದೆ. ನಾನು ಎನ್ನುವ ಕಲ್ಪನೆಯೇ ಅಡಗಿಹೋದ ಬಳಿಕ, ಭಗವಂತನೇ ನೀನು ಎನ್ನುವುದೆಲ್ಲಿ ಇದ್ದೀತು ಹೇಳು? ನಾನೂ ಇಲ್ಲ, ನೀನೂ ಇಲ್ಲ. ನನ್ನಲ್ಲಿ ನೀನು ಅಡಗಿದೆ; ನಿನ್ನೊಳಗೆ ನಾ ಅಡಗಿದೆ. ಇಂಥ ಅದ್ವಯ ದರ್ಶನ ಮಾಡಿಕೊಂಡ ನಂತರವೂ ಸಂತನು ದೇಹ, ಮನ, ಬುದ್ಧಿಗಳಲ್ಲಿ ಪ್ರವೇಶಿಸುತ್ತಾನೆ. ದೈಹಿಕ, ಮಾನಸಿಕ, ಬೌದ್ಧಿಕ, ಭೇದವನ್ನು ಕಾಣುತ್ತಾನೆ. ಆದರಿಷ್ಟೇ, ಆ ಭೇದ ಮೇಲು ಮೇಲಿನದು!

ನಾವು ಮಾತ್ರ ವ್ಯಕ್ತಿ ವ್ಯಕ್ತಿಗಳಲ್ಲಿ ಜಾತಿ ಭೇದ ಮಾಡುತ್ತೇವೆ. ಮುಗ್ಧ ಮಕ್ಕಳು. ಪ್ರಸನ್ನ ಮುಖ. ಒಳಹೊರಗೆಲ್ಲ ಏಕರೂಪ. ಹೂವಿನಂಥ ಜೀವ. ಅವುಗಳಲ್ಲೂ ಮೇಲು-ಕೀಳು ಎಣಿಸುತ್ತೇವೆ. ಆ ಮೇಲು ಕೀಳು ಎಲ್ಲಿದೆ? ಕಾಣುತ್ತದೆಯೇ? ಇಲ್ಲ. ಯಾರೋ ಹೇಳಿದರು. ನಾವು ನಂಬಿದೆವು. ಜಾತಿ ಸತ್ಯಸ್ಯ ಸತ್ಯವೆಂದೇ ನಿಶ್ಚಯಿಸಿದೆವು! ನಮ್ಮ ಭ್ರಮೆ ನಮಗೆ ಸತ್ಯವಾಗಿಬಿಟ್ಟಿದೆ. ಪಂಚಕ ಬಂತು ಶುಭ ಕಾರ್ಯ

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ವಿನಯ ಮತ್ತು ಅಹಂಕಾರಗಳನ್ನು ಸಮನ್ವಯಗೊಳಿಸಿ ಬದುಕುವುದೊಂದು ಕಲೆ. -ನಾಗತಿಹಳ್ಳಿ ಚಂದ್ರಶೇಖರ್

ಬೇಡ ಎನ್ನುತ್ತಾರೆ. ಆ ಪಂಚಕ ಎಲ್ಲಿಂದ ಬಂತು? ಎಲ್ಲಿಗೆ ಹೋಯಿತು? ಏಕೆ? ಅದು ಇರುವುದಾದರೂ ಏನು? ನಾವು ಆಲೋಚಿಸುತ್ತಿಲ್ಲ. ನಂಬಿಗೆ ಅಷ್ಟು ಬಲಿಷ್ಠ.

ನಿನ್ನ ರಾಶಿಯನ್ನು ಶನಿ ಪ್ರವೇಶಿಸಿದ. ಇನ್ನೂ ಏಳೂವರೆ ವರ್ಷ ನಿನಗೆ ಕಷ್ಟ ಎಂದು ಹೇಳಿದರು. ನಾವು ನಮ್ಮ ಹಸನಾದ ಬಾಳು ಕೆಡಿಸಿಕೊಂಡೆವು. ನಿಜವಾಗಿಯೂ ಭೇದ ಭ್ರಮೆಯೇ ನಮಗೆ ಶನಿ. ಅದು ಏಳು ವರ್ಷವಲ್ಲ ನೂರು ವರ್ಷ ಕಾಡುತ್ತಿದೆ. ಇಂಥ ಭ್ರಮೆ ನಿವಾರಿಸುವುದೆ ಸತ್ಯವಿದ್ಯೆ. ಆಲೋಚನೆ ಮಾಡದಿರುವುದೇ ಪ್ರಪಂಚ, ಮಾನಸಿಕ ಗೊಂದಲ. ಸುತ್ತೆಲ್ಲ ನೋಡಿದಾಗ ಸಮದರ್ಶನ, ಸಮಾಧಾನವಾದರೆ ಅದು ಧರ್ಮ. ಭೇದಭಾವ ಹೆಚ್ಚಿ, ತಲೆ ಕಾಯ್ದು ಹೋಗಿದ್ದರೆ ಅದು ಅಧರ್ಮ...

ಸಂತರು ಮೂಲವಸ್ತುವನ್ನು ಕಂಡರು, ಯಾವಾಗ? ಯಾವಾಗ ಮೈಕ್ರೋಸ್ಕೋಪ್, ಟೆಲಿಸ್ಕೋಪ್ ಇರಲಿಲ್ಲ, ಮ್ಯಾಥಮೆಟಿಕ್ಸ್ ಇಷ್ಟು ಅದ್ಭುತವಾಗಿ ಬೆಳೆದಿರಲಿಲ್ಲ. ಶ್ರೇಷ್ಠ ವಿಜ್ಞಾನಿಗಳು ಜಗತ್ತನ್ನು ಇನ್ನೂ ಅರಿತುಕೊಂಡಿರಲಿಲ್ಲ, ಸಿದ್ಧಾಂತಗಳನ್ನು ಮಂಡಿಸಿರಲಿಲ್ಲ, ಆವಾಗ, ಬರೀ ಕಣ್ಣಿನಿಂದ ನೋಡಿ ವಿಶ್ವದ ಅನಂತತೆಯನ್ನು ಸತ್ಯದ ಪರಿಸೂಕ್ಷ್ಮತೆಯನ್ನು ಅರಿತು ಅನುಭವಿಸಿದರು. ವಿಶ್ವದ ಆದಿ ಅಂತ್ಯಗಳಲ್ಲಿ ನೆಲೆಸಿದ ತತ್ತ್ವ ಕಂಡರು ಮತಿಗಣ್ಣಿನಿಂದ. ಆ ತತ್ತ್ವ ಬರಿ ಬಯಲು.

ಬೆಟ್ಟದೆತ್ತರದ ತೆರೆಗಳು ಎಲ್ಲಿ ಅಡಗಿಹೋಗುತ್ತವೆ, ಎಲ್ಲಿ ಏಳುತ್ತವೆ ಅದೇ ಸಾಗರ! ಸಾಗರದ ದಡದೊಳಗೆ ಕುಳಿತುಕೊಂಡರೂ ಬರೀ ತೆರೆಗಳನ್ನೇ ನೋಡುವ ಮನುಷ್ಯನಿಗೆ ಸಾಗರ ಕಾಣಿಸುವುದಿಲ್ಲ! ಸಾಗರ. ನೋಡಲು ಕಣ್ಣು ಬೇಕು. ತೆರೆಯ ಹಿಂದೆ, ಒಳಗೆ ಕಾಣುವ ದೃಷ್ಟಿ ಬೇಕು. ಇಲ್ಲವಾದರೆ ಕೇವಲ ತೆರೆಗಳೇ ಕಂಡಾವು! ಹಾಗೆ, ಜಗತ್ತನ್ನು ಕಾಣುವಾಗ ಕೇವಲ ವಿವಿಧ ವಸ್ತು–ವ್ಯಕ್ತಿ ತೆರೆಗಳನ್ನೇ ಕಾಣುತ್ತಿದ್ದರೆ ಸತ್ಯ–ಸಾಗರದ ದರ್ಶನವಾಗದು. ಸಂತರಿಗೆ ಸಾಗರ ದರ್ಶನ. ನಮಗೆ ಭೇದ ತೆರೆಗಳ ತೋರಿಕೆ. ಅವರಿಗೆ ಬದುಕು ಕಂಡಂತೆ ನಮಗೆ ಕಾಣುತ್ತಿಲ್ಲ. ನಮಗೆ ಕಂಡುದು ಅವರಿಗೆ ಸತ್ಯವಾಗಿಲ್ಲ!

ಆಚಾರ್ಯ ಶಂಕರರು ತಮಗೆ ಕಂಡ ಬಾಳಸತ್ಯವನ್ನು ಹೀಗೆ ವರ್ಣಿಸಿದ್ದಾರೆ.

*ನಲಿನೀದಲಗತ ಜಲಮತಿತರಲಂ*
*ತದ್ವತ್ ಜೀವಿತಮತಿಶಯಚಪಲಂ*
*ವಿದ್ಧಿ ವ್ಯಾಧ್ಯಭಿಮಾನಗ್ರಸ್ತಂ*
*ಲೋಕಂ ಶೋಕಹತಂ ಚ ಸಮಸ್ತಂ (ಭಜ ಗೋ.೪)*

ಕಮಲದೆಲೆ, ನಸುಕಿನ ಸಮಯ, ಸೂಸು ಗಾಳಿ. ಇಬ್ಬನಿಗೊಂದು ಆ ಎಲೆಯ ತುದಿಯಲ್ಲಿ ತೂಗಾಡುತ್ತಿದೆ. ಅದು ಯಾಗಾವ ಕಳಚಿ ಕೆಳಗೆ ಬಿದ್ದೀತು ತಿಳಿಯದು. ಹಾಗೆ ನಮ್ಮ ಮಾನವೀಯ ಬಾಳು. ಅದು ಅತಿ ಚಪಲ; ಅಸ್ಥಿರ, ಆಧಿ ಹಾಗೂ ವ್ಯಾಧಿಗಳಿಂದ ಗ್ರಸ್ತವಾಗಿದೆ. ಸಮಸ್ತ ಲೋಕ ಇಂಥ ಅಸ್ಥಿರ ಬಾಳಿಗೆ ಅಂಟಿಕೊಂಡಿದೆ; ಅದರಲ್ಲಿ ಅಭಿಮಾನಿಸುತ್ತಿದೆ. ಹನಿಯ ಚಪಲತೆ, ತರಲತೆ ತಿಳಿಯದೆ. ತಿಳಿದರೆ ಹನಿ ಬೀಳದೆಂದಲ್ಲ. ತಿಳಿದರೂ ತಿಳಿಯದಿದ್ದರೂ ಬದುಕು ಕಳಚುವುದೇ. ಆದರೆ ತಿಳಿದು ಬದುಕುವರು ಸಂತಸ ಪಡುತ್ತಾರೆ ಬದುಕಿನಾದ್ಯಂತ. ತಿಳಿಯದೇ ಬದುಕಿದವರು ಅಸಂತುಷ್ಟರಾಗಿ ಬಾಳುತ್ತಾರೆ.

ಬಾಳಿನಲ್ಲಿ ಆಧಿ ವ್ಯಾಧಿ ಅಭಿಮಾನ ಎಲ್ಲ ಇರುವುದೇ. ಅವುಗಳನ್ನು ಸಂಪೂರ್ಣ ತೆಗೆದುಹಾಕಲಾಗದು! ಬದುಕು ಹೂವಿನ ಹಾಸಿಗೆಯಲ್ಲ! 'ಮುಳ್ಳಿನ ಹಾಸಿಗೆ ಕಳ್ಳಿಯ ಹಾಲಿನ ಘನರಸ'.

ಯಾರ ಬದುಕಾದರೇನು? ಹೂವು ಮುಳ್ಳೂ ಇರುವುದೇ. ಬುದ್ಧ, ಬಸವಣ್ಣ, ಮಹಾವೀರ ಎಲ್ಲರ ಜೀವನದಲ್ಲಿಯೂ ಮುಳ್ಳುಗಳಿದ್ದವು. ಕಲ್ಲುಗಳಿದ್ದವು. ಆತಂಕಗಳು ಸಾವಿರಾರು. ಸಣ್ಣವರ್ಗೆ ಸಣ್ಣ ಆತಂಕ, ದೊಡ್ಡವರಿಗೆ ದೊಡ್ಡವು. ನಿರಾತಂಕ ಕನಸಿನ ಮಾತು. ಏನೂ ಏನೂ ಆಸ್ತಿ ಇಲ್ಲದ ಯಾವ ವ್ಯಸನಗಳೂ ಇಲ್ಲದ ಸನ್ಯಾಸಿಗೂ ಆಧಿ ವ್ಯಾಧಿಗಳು. ಪ್ರಾಪಂಚಿಕನಿಗೂ ಆಧಿ ವ್ಯಾಧಿಗಳು. ಅಭಿಮಾನವಂತೂ ಸ್ಥೂಲವಾಗಿ ಸೂಕ್ಷ್ಮವಾಗಿ ಎಲ್ಲರ ಮನಸ್ಸನ್ನೂ ಆಕ್ರಮಿಸಿದೆ.

ನಾನು ಅದೆಷ್ಟೇ ತಾತ್ವಿಕ ಮಾತುಗಳನ್ನಾಡುತ್ತಿರಲಿ. ಯಾರಾದರೂ 'ಸಾಕು, ನಿಲ್ಲಿಸಿ ಮಾತ' ಎಂದು ಚಪ್ಪಾಳೆ ಇಕ್ಕಿದರೋ ಮನಸ್ಸು ವ್ಯಗ್ರವಾಗುತ್ತದೆ. ಅಭಿಮಾನಕ್ಕೆ ಧಕ್ಕೆಯಾಗುತ್ತದೆ. ಒಳ ತಾಪ ಹೆಚ್ಚುತ್ತದೆ! ಆ ತಾಪವನ್ನು ತಡೆದು ಕೊಳ್ಳುವುದೇ ಕಷ್ಟ. ಅದು ರೋಷವಾಗಿಯೋ

ತ್ರಿಶಂಕು ಎಂದರೆ ಮೂರು ಪಾಪಗಳನ್ನು ಮಾಡಿದವನು ಎಂದು ಅರ್ಥ.- ನರಹಳ್ಳಿ ಬಾಲಸುಬ್ರಹ್ಮಣ್ಯ





ನಿರಾಶೆ ಯಾಗಿಯೋ ದುಃಖವಾಗಿಯೋ ವ್ಯಕ್ತವಾಗುತ್ತದೆ.

ಇದು ಶಂಕರರ ದೃಷ್ಟಿಯಲ್ಲಿ ಜೀವನ! ಅವರ ತಾತ್ತ್ವಿಕ ಮತಿಗೆ ಕಾಣಬಂದ ಬಾಳಿನ ಸ್ವರೂಪ! ಬದುಕಿನ ಸತ್ಯ.

ಜ್ಞಾನೇಶ್ವರರು ೧೦–೧೮ ವರ್ಷದಲ್ಲಿ ಅಪ್ರತಿಮ ಭಾಷ್ಯ ಬರೆದರು ಭಗವದ್ಗೀತೆಗೆ! ಇಡೀ ಮಹಾರಾಷ್ಟ್ರ ಅವರನ್ನು ಹಾಡಿ ಹರಸುತ್ತಿದೆ. ಅದರಲ್ಲಿ ಅನುಭವ–ಅನುಭಾವ ಸೂರೆಯಾಗಿದೆ. ಓದುಗ ಸಹೃದಯನಾಗಿದ್ದರೆ ಅದರ ಓದಿನಲ್ಲಿ ಹರ್ಷೋದ್ರೇಕ ತಾಳುತ್ತಾನೆ. ಅಂಥ ಮಹಾಜ್ಞಾನಿ ಜ್ಞಾನೇಶ್ವರ. ಆದರೇನು? ಅವರು ಬದುಕಿದಾಗ ಸಮಾಜ ಅವರನ್ನು ಬಹಿಷ್ಕರಿಸಿತು. ದೇವರು ಹಚ್ಚಿಕೊಂಡ, ಆದರೆ ಸಮಾಜ ಹಚ್ಚಿಕೊಳ್ಳಲಿಲ್ಲ! ಭಗವಂತನಿಗೆ ಗೊತ್ತಾಗುವುದಿಲ್ಲ, ಆತ ಬೇಗ ಪ್ರೀತಿಸುತ್ತಾನೆ. ಆದರೆ ಸಮಾಜ ಹೀಗಲ್ಲ! ಬದುಕಿನಲ್ಲಿ ಹತ್ತು ಹಲವು ರೀತಿಯಲ್ಲಿ ಕಷ್ಟಗಳು ಬರುತ್ತವೆ, ಮಹಾತ್ಮರ ಬಾಳಿನಲ್ಲೂ.

ಜ್ಞಾನೇಶ್ವರರ ತಂದೆ, ಮನೆ ತೊರೆದು ಸನ್ಯಾಸಿಯಾದ, ನಂತರ ಮತ್ತೆ ಗೃಹಸ್ಥನಾದ. ಸಮಾಜದ ಕಣ್ಣಿನಲ್ಲಿ ಅದು ಮಹಾಪಾಪ. ಆ ಪಾಪಕ್ಕೆ ಅವನ ಮಕ್ಕಳು ಬಲಿಯಾದರು! ಜ್ಞಾನಿ ಮಕ್ಕಳು. ಜ್ಞಾನೇಶ್ವರ, ನಿವೃತ್ತಿನಾಥ, ಮುಕ್ತಾಬಾಯಿ, ಸೋಪಾನದೇವ– ನಾಲ್ಕು ಜನ. ಅಂಥ ಜ್ಞಾನಿಗಳೆ ಸಮಾಜದ, ಪರಿಸರದ ಒತ್ತಡಕ್ಕೆ ಸಿಕ್ಕಿ ನಷ್ಟ ಅನುಭವಿಸಬೇಕಾಗುತ್ತದೆ ಎಂದಾಗ ನಮ್ಮಂಥವರ ಕಷ್ಟ ಏನು ಹೇಳುವುದು?

ಜ್ಞಾನಿಗಳಲ್ಲಿ ಅಭಿಮಾನವಿರದಿದ್ದರಿಂದ ನೆಮ್ಮದಿಯಾಗಿರುತ್ತಾರೆ. ನಮ್ಮಲ್ಲಿ ಅಭಿಮಾನ ಬಹಳ. ಅದಕ್ಕೆ ಪೆಟ್ಟಾದರೆ ನೋವು ಅನುಭವಿಸುತ್ತೇವೆ. ಎಲ್ಲರಲ್ಲೂ ಅಭಿಮಾನ. ನಮಗಿಂತ ದೊಡ್ಡವರ ಮುಂದೆ ಸ್ವಚ್ಛಂದವಾಗಿ ವ್ಯಕ್ತವಾಗುವುದಿಲ್ಲ. ನಮಗಿಂತ ಸಣ್ಣವರೆಂದು ತಿಳಿದುಕೊಂಡವರ ಎದುರಿನಲ್ಲಿ ಅದು ವ್ಯಕ್ತವಾಗುತ್ತದೆ. ಈ ಅಭಿಮಾನವೆಂಬ ಮನೋರೋಗದಿಂದ ಆಧುನಿಕ ಮಮಷ್ಯ ಬಹುವಾಗಿ ಬಳಲುತ್ತಾನೆ. ಕೋಟಿ ಕೋಟಿ ಧನವನ್ನು ಸುರಿದ. ಸರ್ವ ಮನುಕುಲ ವಿನಾಶಕ 'ಬಾಂಬು'ಸಿದ್ಧಗೊಳಿಸಿದ. ಇದು ಆತನ ಉನ್ಮಾದದ ಅತಿರೇಕ! ಶಾಲೆಯ ಮಾತು, ಜೀವರಕ್ಷಣೆಯ ಆತುರ, ಪ್ರಾಣಿ ದಯಾ ಸಂಘ ರಚನೆ, ಅದರೊಂದಿಗೆಯೇ ಮಹಾಸ್ತ್ರ ಸಂಚಯ! ಇದು ಆರೋಗ್ಯವಂತ ಮನಸ್ಸಿನ ಲಕ್ಷಣವೇನಲ್ಲ. ಉಣ್ಣಲಿಲ್ಲ, ಉಡಲಿಲ್ಲ, ಕೊಡಲಿಲ್ಲ, ಕಟ್ಟಲಿಲ್ಲ. ಮಾನವೀಯ ಗಳಿಕೆಯನ್ನೆಲ್ಲ ವಿನಾಶ ಅಸ್ತ್ರಕ್ಕೆ ಹವಿಸುವ ಅವನು ಮನೋವೈಕಲ್ಯದಿಂದ ಬಳಲುತ್ತಿದ್ದಾನೆ ಎಂದೇ ಅರ್ಥ.

ಮನೆಯಲ್ಲಿ ಹೆಂಡತಿ, ನಾಲ್ಕು ಮಕ್ಕಳು, ಬಡಮನುಷ್ಯ. ಒಂದು ಗಾಡಿ ಓಡಿಸಿ ಹಮಾಲಿ ಮಾಡುವ ಮನುಷ್ಯ. ಎಂಟು ಹತ್ತು ರೂಪಾಯಿ ಗಳಿಸುತ್ತಾನೆ. ಒಂದು ದಿನ ತರದೆ ಇದ್ದರೆ ಮನೆ ನಡೆಯುವುದಿಲ್ಲ, ಮಕ್ಕಳದು ಕಷ್ಟ. ಇಷ್ಟೆಲ್ಲಾ ಇದ್ದರೂ ರೊಕ್ಕ ಸಿಕ್ಕ ಕೂಡಲೇ ಮಸ್ತಾಗಿ ಕುಡಿದು ಹೆಂಡತಿ ಬಡಿಯುತ್ತಾನಲ್ಲ, ಆತ ಮನೋರೋಗಿಯಲ್ಲದೆ ಇನ್ನೇನು? ಊಟ ಬಿಟ್ಟು, ನಿದ್ರೆಕಟ್ಟಿ ಆರೋಗ್ಯ ಕೆಡಿಸಿಕೊಂಡು ವಿಪರೀತ ಸಂಪಾದನೆಗೆ ತೊಡಗುತ್ತಾನಲ್ಲ ಅದು ಆರೋಗ್ಯವೆಂದು ಹೇಗೆ ಹೇಳುವುದು? ಈಗ ನನಗೆ ಹತ್ತುಸಾವಿರ ಪಗಾರ ಪ್ರಾಮಾಣಿಕವಾಗಿ ಕೆಲಸ ಮಾಡುವುದಕ್ಕೆ. ಅದರ ಮೇಲೆ ಲಕ್ಷಾಂತರ ಬೇಕು ಎಂದು ಅನ್ಯಾಯ ಕಾರ್ಯದಲ್ಲಿ ತೊಡಗಿದವ ಮಾನಸಿಕ ವ್ಯಾಧಿಯುಳ್ಳವನೆಂದಲ್ಲವೆ? ಆದ್ದರಿಂದ ಅವನು ಸದಾ ಅಸಮಾಧಾನಿ.

ಪಶುಪಕ್ಷಿಗಳಿಗೆ ದೈಹಿಕ ರೋಗಗಳಿವೆ ನಿಜ; ಆದರೆ ಅವು ಮನೋರೋಗದಿಂದ ಬಳಲುತ್ತಿಲ್ಲವೆನಿಸುತ್ತದೆ ನಮ್ಮಂತೆ, ನಮ್ಮಷ್ಟು! ಹಕ್ಕಿ ಹಾಡುತ್ತದೆ. ವೃಕ್ಷ ಉಲಿಯುತ್ತದೆ. ಹಾಡು ಕೇಳಿದ ವೃಕ್ಷ, ಹಣ್ಣು ತಿಂದ ಹಕ್ಕಿ ಸ್ವರ್ಗೀಯ ಸಂತಸ ಅನುಭವಿಸುತ್ತಿರಬೇಕು! ಕಾರಣವಿಷ್ಟೆ ಅವುಗಳಲ್ಲಿ ಆತ್ಮಹಂ ಇಲ್ಲ. ಅತಿ ಲೋಭವಿಲ್ಲ. ಭವಿಷ್ಯದ ಭಾರೀ ಕನಸುಗಳಿಲ್ಲ. ಮಾನಾಪಮಾನದ ಜಂಜಡವಿಲ್ಲ. ಅವುಗಳ ಮೈತ್ರಿ ಸಹಜ. ಆನಂದವೂ ಸಹಜ.

ಆ ಭಾಗದಲ್ಲೆಲ್ಲಾ ಬರಗಾಲ ಬಿತ್ತು, ಗಿಡಕ್ಕೆ ನೀರು ಸಿಗಲಿಲ್ಲ. ಗಿಡವನಾಶ್ರಯಿಸಿದ ಪುಟ್ಟ ಹಕ್ಕಿ ಅಲ್ಲಲ್ಲಿ ಹಾರಿ ಮತ್ತೆ ಸಾಯಂಕಾಲ ಅದೇ ಗಿಡದಲ್ಲಿ ಬಂದು ಕೂಡುತ್ತಿತ್ತು. ಗಿಡ ಹೇಳಿತು, 'ಗೆಳೆಯನೆ ನಾನು ಸಾಯುತ್ತಿದ್ದೇನೆ, ನಿನಗೆ ಇನ್ನು ಹಣ್ಣು ಕೊಡಲಾರೆ, ಆಶ್ರಯ ಈಯಲಾರೆ; ಎಲ್ಲಿ ನೀರಿದೆ, ಎಲ್ಲಿ ಆಶ್ರಯವಿದೆ ಎಲ್ಲಿಗೆ ಹೋಗು. ಸಂತೋಷದಿಂದ ಬದುಕು'. ಹಕ್ಕಿ ನುಡಿಯಿತು, 'ನಿನ್ನ ಮೈತ್ರಿ, ಆಸರೆ ಅನುಭವಿಸಿದ್ದೇನೆ, ಸಂತೋಷಿಸಿದ್ದೇನೆ, ನೀನೀಗ ದೇವನತ್ತ ಸಾಗುತ್ತಿರುವಿ. ನೀನು ಕೊನೆಯುಸಿರೆಳೆ ವವರೆಗೂ ನಿನ್ನ ಹತ್ತಿರ ಕೂಡುವೆ. ನನ್ನ ಇಂಪಾದ ಸಂಗೀತ ಕೇಳಿಸುವೆ!

ಸಾವ ಕ್ಷಣವಾದರೇನಾಯಿತು? ನಾನು ಹಾಡುವೆ; ನೀನು ಹರ್ಷದಿಂದ ಕೇಳು. ನನ್ನ ಧ್ವನಿ ಕೇಳಿ ನಿನ್ನ ಹೃದಯ ಉಕ್ಕಿ ಬರುತ್ತದೆ ಆನಂದದಿಂದ! ಸಾವನ್ನು ಸಂತಸ ಗೊಳಿಸೋಣ!'

ಒಂದು ದಿವಸ ಗಿಡ ಸತ್ತಿತು, ಅರುಣೋದಯ ದೊಳಗೆ ಹಕ್ಕಿಯ ಧ್ವನಿ ಕೇಳುತ್ತಾ ಗಿಡ ಸತ್ತುಹೋಯಿತು. ಪಕ್ಷಿ ಮೇಲೆ ಹಾರಿತು, ದೂರ ದೂರ ಹೋಯಿತು, ಹಾಡಿತು. ಅಲ್ಲಿ ಆ ಹಕ್ಕಿಗೆ ಓರ್ವ ಸಂತ ಭೆಟ್ಟಿಯಾದ, ಕೇಳಿದ 'ನಿನ್ನ ಹಿರಿಯ ಮಿತ್ರ ಸತ್ತುಹೋದ. ಆದರೂ ಹಾಡುತ್ತೀಯಲ್ಲ? ದುಃಖವಾಗಿಲ್ಲವೆ?' ಹಕ್ಕಿ ಹೇಳಿತು, 'ಸಂತರೆ, ಎಲ್ಲಿಯವರೆಗೆ ಬದುಕು ಇದೆ ಅಲ್ಲಿಯವರೆಗೆ ಸಂತೋಷಿಸುವುದು. ಯಾವಾಗ ವೃಕ್ಷದ ಬದುಕು ಇದೆ ಅಲ್ಲಿಯವರೆಗೆ ಸಂತೋಷಿಸುವುದು. ಯಾವಾಗ ವೃಕ್ಷದ ಬದುಕು ಮುಗಿಯಿತೋ ಅಲ್ಲಿಗೆ ಅದು ನೆನಹಾಗಿ ನಮ್ಮ ಮನವ ಸೇರಿತು! ಅದೂ ಸಂತಸದ ಅನುಭವ! ನಾನು ಹಕ್ಕಿ, ಹರ್ಷ ನನ್ನ ಬದುಕು, ಹಾಡು ನನ್ನ ನಲಿವು. ಈಗ ನನ್ನ ಸುತ್ತ ಭವ್ಯವೃಕ್ಷಗಳು. ವಸಂತ. ಗೆಳೆಯನಗಲಿದ ನೋವು ಈಗ ನಲವಿನ ರೂಪ ತಾಳಿದೆ. ಹಾಡದೆ ಏನು ಮಾಡೇನು?' ಆ ಹಕ್ಕಿಯಲ್ಲಿ ಅತಿರಾಗವಿಲ್ಲ. ವಿದ್ವೇಷವಿಲ್ಲ. ಮನುಷ್ಯ ಮಾತ್ರ ರಾಗಾದಿಗಳಿಂದ ಬಳಲುತ್ತಿದ್ದಾನೆ. ಆಧಿ ವ್ಯಾಧಿ ಅಭಿಮಾನಗ್ರಸ್ಥ ಶೋಕಹತ!!'

ಮೇಲಿದ್ದವರು, ಕೆಳಗೆ ಇದ್ದವರು ಎಲ್ಲರೂ ಶೋಕ ಹತರಾಗಿಬಿಟ್ಟರು ಈ ಜಗತ್ತಿನೊಳಗೆ. ನಮ್ಮ ನೋವುಗಳು ಮುಗಿಯದ ನೋವುಗಳು. ನಮ್ಮ ಜೀವನವನ್ನೇ ನುಂಗಿ ಹಾಕುತ್ತಲಿವೆ. ಏಕೆಂದರೆ ನಾವು ಮಾನಸಿಕ ರೋಗಿಗಳು. ಮನಸ್ಸು ನಿಶ್ಶಕ್ತವಾದರೆ ಸಣ್ಣಪುಟ್ಟ ನೋವುಗಳೂ ತಲೆ ತಿನ್ನುತ್ತವೆ. ಸಾಮಾಜಿಕ ಸಂಬಂಧಗಳು ಅಸ್ತವ್ಯಸ್ತವಾಗುತ್ತವೆ. ಹೊಂದಾಣಿಕೆ ತಪ್ಪಿಹೋಗುತ್ತದೆ. ಜೀವನ ನೀರಸವಾಗುತ್ತದೆ. ಶೋಕ ಮುತ್ತಿಬಿಡುತ್ತದೆ.

ಈ ಶೋಕ ಕಳೆದುಕೊಳ್ಳುವುದಕ್ಕಾಗಿಯೇ ಭಗವತ್ ಚಿಂತನೆ! ದೇವ ಚಿಂತನೆಯದು ತಂಪಾದ ಬೆಳದಿಂಗಳು, ಆಹ್ಲಾದಕರ. ನೋವು ಮರೆಸುವ ಶಕ್ತಿ ಅದರಲ್ಲಿ. ಬೆಳದಿಂಗಳಲ್ಲಿ ಸುಮ್ಮನೆ ಕೂಡುವುದಷ್ಟೇ. ಆ ಪರಿಸರ ಪ್ರಶಾಂತಿ ತಾನಾಗಿಯೇ ನಮ್ಮನ್ನು ಪ್ರವೇಶಿಸುವುದು. ಹಾಗೆ ಚಿಂತನೆಯೆಂದರೆ ಸತ್ಯ–ಸೌಂದರ್ಯ ಶಾಂತಿಯ ನೆನಹಿನಲ್ಲಿ ಮೈಮರೆಯುವುದು! ಆನಂದ ತಾನಾಗಿಯೇ ಸುರಿಯುವುದು ವೃಷ್ಟಿಯಂತೆ!

ಒಬ್ಬ ಹುಡುಗ, ಅವನಿಗೆ ದೇವರನ್ನು ನೋಡಬೇಕೆಂದು ಬಹಳ ಇಚ್ಛೆ, ಒಂದು ದೇವಾಲಯಕ್ಕೆ ಹೋದ, ಬಾಗಿಲು ಬಡಿದ. ಬಾಗಿಲು ತೆಗೆಯಲಿಲ್ಲ. ಮತ್ತೊಂದು ದೇವಾಲಯಕ್ಕೆ ಹೋದ. ಇವ ಹೋದ ಕೂಡಲೇ ಬಾಗಿಲು ಮುಚ್ಚಿತು, ತೆರೆಯಲಿಲ್ಲ. ಹುಡುಗ ತಿರುಗಾಡಿದ, ಎಲ್ಲೆಲ್ಲಿಯೋ ಹೋದ. ಎಲ್ಲ ದೇವರ ಬಾಗಿಲು ಮುಚ್ಚುತ್ತಾ ಮುಚ್ಚುತ್ತಾ ಹೋದುವು. ನಿರಾಶನಾಗಿ ಹುಡುಗ ಗಿಡದ ಕೆಳಗೆ ಕುಳಿತು ಕಣ್ಣೀರು ಸುರಿಸಿದ, ಅಲ್ಲಿಗೆ ತಂಗಾಳಿ ಬಂತು. ಅದು ಮಾತನಾಡಿತು. 'ಯಾಕೆ ಅಳುತ್ತೀ?' ಬಾಲಕ ಹೇಳಿದ, ನನಗೆ ದೇವರ ಕಾಣುವ ಅದಮ್ಯ ಬಯಕೆ. ಆದರೆ ಒಂದೂ ಗುಡಿಯ ಬಾಗಿಲು ತೆರೆಯಲಿಲ್ಲ'. ಆವಾಗ ಅದು ಹೇಳಿತು, 'ಚಿಂತಿಸಬೇಡ, ಬಾಗಿಲು ಹಿಂದೆ ನಾನಿಲ್ಲ. ಬಾಗಿಲ ಹೊರಗೆ ನಾನಿದ್ದೇನೆ. ನಾನು ಅಬಂಧಿತ. ಬಂಧನ ನನಗೆಷ್ಟೂ ಹಿಡಿಸದು. ಅವರು ಬಾಗಿಲು ಹಾಕಿದರೆ ನಾನು ಹೊರಗುಳಿದೆ. ಈಗ ನಿನ್ನ ಹತ್ತಿರ ತಂಗಾಳಿಯಾಗಿ ಬಂದಿದ್ದೇನೆ. ಕಣ್ಣು ತೆರೆ. ಅಳುವುದನ್ನು ನಿಲ್ಲಿಸು. ನನ್ನನ್ನು ಅನುಭವಿಸು. ಆನಂದಿಸು.'ದೇವ ದೇವನ ನೆನಹು ಆನಂದ ಪೂರ್ಣ! ಬಾಲಕನ ಮುಖ ಅರಳಿತು. ಜ್ಞಾನದ ಹೊಸ ಕಿರಣ ಕಂಡಿತು. ಸುತ್ತೆಲ್ಲ ನೋಡಿದ. ಅರುಣೋದಯ, ಆಕಾಶದ ನೀಲವರ್ಣ, ಸುಳಿವ ಗಾಳಿ, ಮುಗಿಲೆತ್ತರದ ಬೆಟ್ಟ, ಅಲ್ಲಿ ಅವನಿಗೆ ಭಗವಂತ ಕಂಡ! ಹೃದಯ ಹರ್ಷದಿಂದ ತುಳುಕಿತು! ಕಂಡ ರೂಪ, ಕೇಳಿದ ಶಬ್ದ, ಪಡೆದ ಸ್ಪರ್ಶ ಎಲ್ಲವೂ ದಿವ್ಯವಾಗಿ ಕಂಡಿತು.

ದೇವರನ್ನು ಅನುಭವಿಸಬೇಕು ಸಾಮಾನ್ಯ ಸಂಗತಿಗಳಲ್ಲಿಯೇ. ತಾಯಿ ನೀಡಿದ ಅನ್ನಕ್ಕೂ, ಪಂಚತಾರಾ ಹೋಟೆಲ್‌ನವರು ಇಕ್ಕಿದ ಅನ್ನಕ್ಕೂ ಬಹಳ ಅಂತರ! ಕಾಣಲು ಎರಡೂ ಒಂದೇ; ಆದರೆ ತಾಯಿಯ ಅನ್ನದ ಅದ್ಭುತ ಸವಿಯನ್ನು ಹೃದಯವಿದ್ದವನೇ ಅನುಭವಿಸಬಲ್ಲ. ಹಾಗೆ ಕಾಣುವ ಸೃಷ್ಟಿಯಲ್ಲಿಯೇ ಸಹೃದಯ ಸಂತ ದೇವನನ್ನು ಅನುಭವಿಸಬಲ್ಲ. ಆಧಿವ್ಯಾಧಿ ಅಭಿಮಾನಗಳ ಮಧ್ಯದಲ್ಲಿಯೂ ಭಗವತ್ಪ್ರಸಾದ ಸವಿಯಬಲ್ಲ. ಅಂಥ ದಿವ್ಯ ಕಲೆಯನ್ನಳವಡಿಸಲೆಂದೇ ಭಗವತ್ ಚಿಂತನ!





# ಸಮದರ್ಶಿ ದೊಡ್ಡಯ್ಯನವರು

-ಟಿ.ಆರ್. ಮಹಾದೇವಯ್ಯ *

ಲೌಕಿಕ ಜೀವನವನ್ನು ಒಲ್ಲದೆ ವೈರಾಗ್ಯದಿಂದ ಪಾರಮಾರ್ಥಿಕ ಪಥದಲ್ಲಿ ಸಾಗುವುದು ಒಂದು ಕ್ರಮ. 'ಸತ್ತು ಕಾಣ್ಬ ಸ್ವರ್ಗಕ್ಕಿಂತ ಇದ್ದು ಕಾಣ್ಬ ನರಕ ಲೇಸೆಂದು' ಲೋಕ ಜೀವನದಲ್ಲಿ ಸಂಪೂರ್ಣ ಮಗ್ನರಾಗಿ ಜೀವನ ಸಾಗಿಸುವುದು ಇನ್ನೊಂದು ಕ್ರಮ. ಒಂದು ಸಂನ್ಯಾಸಿ ಜೀವನ ಕ್ರಮವಾದರೆ ಇನ್ನೊಂದು ಲೌಕಿಕ ಜೀವನ ವಿಧಾನ. ಇದರಲ್ಲಿ ಯಾವುದು ಹೆಚ್ಚಿನದು. ಸಂಸಾರ ಮೇಲೋ, ಸಂನ್ಯಾಸ ಮೇಲೋ? ಎರಡೂ ಜೀವನ ಕ್ರಮಗಳಲ್ಲಿ ಪರ ಮತ್ತು ವಿರುದ್ಧವಾಗಿ ವಾದಿಸಲು ಸಾಕಷ್ಟು ವಿಚಾರಗಳಿವೆ. ಯಾವ ಜೀವನ ವಿಧಾನ ಲೇಸೆಂದು ನಿರ್ಣಯ ಮಾಡಿ ಹೇಳುವುದು ಕಷ್ಟ

ವಿಚಾರ ಮಾಡಿ ನೋಡಿದರು ಹನ್ನೆರಡನೆಯ ಶತಮಾನದ ಶರಣ–ಶರಣೆಯರು. ಸನ್ಯಾಸವು ಲೌಕಿಕ ಜೀವನಕ್ಕೆ ವಿಮುಖವಾದ ಆಧ್ಯಾತ್ಮ ಜೀವನಕ್ಕೆ ಪ್ರಾಮುಖ್ಯತೆ ಕೊಟ್ಟರೆ, ಸಂಸಾರವು ಲೋಕಜೀವನದಾಟದಲ್ಲಿ ತನ್ಮಯವಾಗುತ್ತದೆ. ಒಂದಕ್ಕೆ ಇಹದ ಚಿಂತೆ, ಮತ್ತೊಂದಕ್ಕೆ ಪರದ ಚಿಂತೆ. ಇವೆರಡೂ ವಿರುದ್ಧವೆಂಬಂತೆ ಕಾಣುತ್ತವೆ. ವಾಸ್ತವವಾಗಿ ಅಲ್ಲ. ಪರದ ಚಿಂತೆಗೆ ಇಹದ ಬಾಳು ಅಡ್ಡಿಯಾಗದು. ಇಹ–ಪರ, ಲೌಕಿಕ–ಪಾರಮಾರ್ಥಿಕ ಸಾಧನೆಗಳನ್ನೂ ಒಟ್ಟಿಗೆ ಮಾಡಲು ಸಾಧ್ಯವೆನ್ನಿಸಿತು ಶರಣರಿಗೆ, ತಮ್ಮ ಅಮಳ ಬದುಕಿನ ಪ್ರಯೋಗಶಾಲೆಯಲ್ಲಿ ಪರೀಕ್ಷೆ ಮಾಡಿ ನೋಡಿದರು.

ಸಂನ್ಯಾಸ ಎಲ್ಲರಿಗೂ ಸಾಧಿಸುವುದಿಲ್ಲ. ಅಲ್ಲಮಪ್ರಭುದೇವ, ಸಿದ್ಧರಾಮ, ಉರಿಲಿಂಗದೇವ, ಚನ್ನಬಸವಣ್ಣನವರಂಥ ಯೋಗಿಗಳಿಗೆ ಸಾಧ್ಯ. ತಾವು ಪರಮವೈರಾಗ್ಯ ಮೂರ್ತಿಗಳಾಗಿದ್ದು ಪಾರಮಾರ್ಥಿಕ ಪಥದಲ್ಲಿ ಸಾಗುತ್ತಿದ್ದರೂ ಅವರು ಲೌಕಿಕ ಜೀವನವನ್ನು ಅಲ್ಲಗಳೆಯಲಿಲ್ಲ. ಬದಲು ಕೌಟುಂಬಿಕ ಜೀವನದ ಮೌಲ್ಯವನ್ನೇ ಎತ್ತಿ ಹಿಡಿದಿದ್ದಾರೆ. ಮದುವೆ ಆಗಬೇಕೆನ್ನಿಸಿದರೆ ಆಗಿ, ಆಸ್ತಿ ಮಾಡಬೇಕೆನಿಸಿದರೆ ಮಾಡಿ, ಆದರೆ ಅವುಗಳಲ್ಲೇ ಮುಳುಗಿ ಹೋಗಬೇಡಿ. ಉದಾತ್ತವಾದುದನ್ನು ಚಿಂತಿಸಿ, ಜೀವನಮೌಲ್ಯವನ್ನು ಸಂಪಾದಿಸಿ ಎಂದು ಎಚ್ಚರಿಸುತ್ತಾ ಬಂದರು.

ನಮ್ಮ ಶರಣ ಪರಂಪರೆಯಲ್ಲಿ ಇಹ–ಪರಗಳೆರಡನ್ನೂ ಒಟ್ಟಿಗೆ ಸಾಧಿಸಿ ಮಾದರಿಯಾದ ಅನೇಕ ಶರಣದಂಪತಿಗಳಿದ್ದಾರೆ. ಸ್ವತಃ ಬಸವಣ್ಣನವರೇ ಒಬ್ಬರಲ್ಲ, ಇಬ್ಬರು ಸತಿಯರನ್ನು ಹೊಂದಿದ್ದರು. ಅವರ ಸಾರ್ಥಕ ಬದುಕಿಗೆ, ಆಧ್ಯಾತ್ಮ ಸಾಧನೆಗೆ ಸಾಂಸಾರಿಕ ಜೀವನವೆಂದೂ ತೊಡರಾಗಲಿಲ್ಲ. ಅನ್ಯೋನ್ಯ ದಂಪತಿಗಳು ದೇವರ ಎದುರು ಹಚ್ಚಿಟ್ಟ ಜೋಡಿ ದೀವಿಗೆಗಳಿದ್ದಂತೆ' ಎಂದೂ, 'ಉಭಯ ದೃಷ್ಟಿಯಿಂದ ಏಕದೃಷ್ಟವ ಕಾಣುವಂತೆ' ಎಂದೂ ದಾಂಪತ್ಯ ಜೀವನದ ಮೌಲ್ಯವನ್ನು ಎತ್ತಿ ಹಿಡಿದರು. ಮೋಳಿಗೆ ಮಾರಯ್ಯ–ಮಹಾದೇವಿ, ಆಯ್ದಕ್ಕಿ ಮಾರಯ್ಯ–ಲಕ್ಕಮ್ಮ, ಅಮುಗಿದೇವಯ್ಯ–ರಾಯಮ್ಮ, ಹಡಪದ ಅಪ್ಪಣ್ಣ–ಲಿಂಗಮ್ಮ ಮೊದಲಾದ ಶರಣ ದಂಪತಿಗಳು ಗೃಹಸ್ಥ ಜೀವನವು ಪಾರಮಾರ್ಥಿಕ ಸಾಧನೆಗೆ ಅಡ್ಡಿಯಾಗದು ಎಂಬುದಕ್ಕೆ ಜ್ವಲಂತ ನಿದರ್ಶನವಾಗಿದೆ.

ಇಂಥ ದೈವಿಕವಾದ ಸಾಂಸಾರಿಕ ಜೀವನವನ್ನು ನಡೆಸಿ ಪಾರಮಾರ್ಥಿಕ ಸಾಧನೆ ಮಾಡುತ್ತಾ ಆ ದಿವ್ಯ ಪರಂಪರೆಯನ್ನು ಆಧುನಿಕ ಯುಗವನ್ನು ಮುಂದುವರೆಸಿದ ಪುಣ್ಯಾತ್ಮರಿದ್ದಾರೆ. ೧೨ನೇ ಶತಮಾನದ ಶರಣರ ದಿವ್ಯ ಆದರ್ಶದ ಮುಂದುವರಿಕೆಯಿದು. 'ನೀರ ತಾವರೆಯಂಥ' ಬದುಕನ್ನು ನಡೆಸಿ ತಮ್ಮ ಸುತ್ತಣ ಲೋಕಜೀವನವನ್ನು ಹಸನುಗೈದ ಅಪರೂಪದವರು. ಅಂಥ ಪುಣ್ಯಪುರುಷರಲ್ಲಿ ಬಳ್ಳಾರಿ ಜಿಲ್ಲೆ, ನಾಗರಹಾಳಿನ ದೊಡ್ಡಯ್ಯನವರು ಒಬ್ಬರು. 'ಜಾಣನು ಲೌಕಿಕ–ಪಾರಮಾರ್ಥಿಕಗಳೆರಡನ್ನು ಮಾಣದೆ ನಡೆಸುತಿಹನು' ಎಂಬ ಶ್ರೀ ನಿಜಗುಣ ಶಿವಯೋಗಿಗಳ ಮಾತಿನಂತೆ ನಡೆದು ತೋರಿದ ಅವರು ಸಮದರ್ಶಿಗಳು.

ಬಳ್ಳಾರಿ ಜಿಲ್ಲೆಯ ಆಂಧ್ರದ ಗಡಿಯಲ್ಲಿರುವ ನಾಗರಹಾಳಿನಲ್ಲಿ. ಬಸಪ್ಪ ಮತ್ತು ಶಂಕರಮ್ಮನವರಿಗೆ ೧೯೦೩ರಲ್ಲಿ ದೊಡ್ಡಯ್ಯ ಜನಿಸಿದರು. ಜನ್ಮ ನಕ್ಷತ್ರಕ್ಕೆ ಅನುಗುಣವಾಗಿ ಪಂಚಾಕ್ಷರಯ್ಯ ಎಂದು ಹೆಸರಿಟ್ಟರು. ಮನೆ ದೇವರು ದೊಡ್ಡಬಸವೇಶ್ವರನ ಸ್ಮರಣೆಗಾಗಿ ದೊಡ್ಡಯ್ಯನೆಂದೇ ಕರೆದರು. ಹುಟ್ಟಿನಿಂದ ಬಂದ ಜ್ಞಾನವು ಮನೆಯ ವಾತಾವರಣದಲ್ಲಿ, ಶಾಲೆಯಲ್ಲಿ ದೊರೆತ

* ೧೩೬, ೧ನೇ ಮೈನ್, ೨ನೇ ಹಂತ, ನಾಗರಭಾವಿ ೨ನೇಹಂತ, ಬೆಂಗಳೂರು–೫೬೦ ೦೭೨.

ಉತ್ತಮ ಶಿಕ್ಷಣದಿಂದ ಬೆಳಗಿತು. ಮಾಧ್ಯಮಿಕ ಶಿಕ್ಷಣದ ನಂತರ ಶಿಕ್ಷಕ ತರಬೇತಿ ಮುಗಿಸಿದ್ದರಿಂದ ಶಿಕ್ಷಕರಾಗುವ ಯೋಗ ಒದಗಿತು. ಅವರು ಮನೆಯಲ್ಲಿ ನಡೆಸಿದ ಅಧ್ಯಯನ, ದೊಡ್ಡವರ ಮಾರ್ಗದರ್ಶನದಿಂದ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡರು. ಮಹಾತಪಸ್ವಿ ಶ್ರೀ ಸಿದ್ಧಲಿಂಗ ಶಿವಯೋಗಿಗಳ ಸಂಪರ್ಕದಿಂದ ಅವರ ಆಧ್ಯಾತ್ಮ ಸಂಪದ ಹೆಚ್ಚಿತು. ಗುರುಗಳಿಂದ ದೀಕ್ಷಾ ಸಂಪನ್ನರಾದರು. ಶಿವಜ್ಞಾನ, ಶಿವಭಕ್ತಿಗೆ ಸಂಸಾರವು ಬಂಧನ ವಲ್ಲ, ಸಹಕಾರಿ ಎಂಬುದನ್ನು ಅವರು ಅರಿತರು. ಶರಣರ ಆದರ್ಶದ ಹಾದಿ ಅವರಿಗೆ ತೆರೆದೇ ಇತ್ತು. ಅವರಲ್ಲಿ ಲೌಕಿಕ ವಾಗಿ ವ್ಯಾವಹಾರಜ್ಞಾನ, ಪಾರಮಾರ್ಥಿಕವಾಗಿ ಆತ್ಮಜ್ಞಾನ ಜೊತೆಯಾಗಿ ಅಭಿವೃದ್ಧಿ ಹೊಂದಿದವು.

ಪ್ರಾಪ್ತ ವಯಸ್ಕರಾದ ದೊಡ್ಡಯ್ಯನವರು ನಾಡುಗದ ವೀರಭದ್ರಯ್ಯ ಮತ್ತು ಗೌರಮ್ಮ ದಂಪತಿಗಳ ಸುಪುತ್ರಿ ಬಸಮ್ಮ ನವರನ್ನು ಮದುವೆಯಾದರು, ಶರಣ ಗೃಹಸ್ಥ ಜೀವನ ನಡೆಸಿದರು. ದೊಡ್ಡಯ್ಯನವರು ಲೌಕಿಕವಾಗಿ ಶಾಲೆಯಲ್ಲಿ ಹುಡುಗರಿಗೆ ಶಿಕ್ಷಕರು, ಪಾರಮಾರ್ಥಿಕವಾಗಿ ಲೋಕಶಿಕ್ಷಕರು. ಅಂದರೆ ಪ್ರವಚನಕಾರರು, ಧರ್ಮದ ಬಗೆಗಿನ ತಿಳುವಳಿಕೆ, ಗ್ರಂಥಾಧ್ಯಯನ, ಆಚಾರಸಂಪನ್ನತೆ, ಗಳಿಸಿದ ಅನುಭಾವಗಳಿಂದ ಪುಷ್ಟಿಗೊಂಡ ಬೋಧಕರಾಗಿ ಯಶಸ್ವೀ ಪ್ರವಚನಕಾರರಾದರು. ಎಲ್ಲರ ಬದುಕು ಹಸನಾಗಬೇಕು. ಎಲ್ಲರೂ ಭಕ್ತಿಸಂಪನ್ನರಾಗ ಬೇಕು. ಎಲ್ಲೆಲ್ಲೂ ಸುಖ-ಶಾಂತಿ ನೆಲೆಗೊಳ್ಳಬೇಕು ಎಂಬುದು ಅವರ ಆಶಯವಾಗಿತ್ತು. ಕನ್ನಡ, ಸಂಸ್ಕೃತ, ತೆಲುಗು, ಇಂಗ್ಲಿಷ್ ಭಾಷೆಗಳನ್ನು ಬಲ್ಲ ಪಂಡಿತರಾದ ಶಾಸ್ತ್ರಿಗಳು ಜನಮನವ ಗೆದ್ದರು. ಜೊತೆಗೆ ಧರ್ಮಜಾಗೃತಿಯುಂಟು ಮಾಡಲು ಶಿವಾನುಭವ ಸಂಘಗಳನ್ನು ಸ್ಥಾಪಿಸಿ ಜನರಲ್ಲಿ ಸಂಘಟನೆ ಮತ್ತು ಸಾಂಸ್ಕೃತಿಕ ಜಾಗೃತಿ ಉಂಟುಮಾಡಿದರು. ಆಂಧ್ರದ ಗಡಿಭಾಗದಲ್ಲಿ ಕನ್ನಡದ ಇಂಪು, ಸೊಂಪು, ಕಂಪುಗಳನ್ನು ಹರಡಿದ ಅಗ್ಗಳಿಕೆ ಅವರದು.

ದೊಡ್ಡಯ್ಯನವರು ಅದ್ಭುತ ಪ್ರವಚನಕಾರರಿದ್ದಂತೆ ಒಳ್ಳೆಯ ಬರಹಗಾರರಾಗಿದ್ದರು. ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದಲ್ಲಿ ನೀಡಿದ ಉಪನ್ಯಾಸವೂ ಸೇರಿದಂತೆ ಅನೇಕ ಕೃತಿಗಳು ಹೊರಬಂದಿವೆ. ಶಿವಶರಣರ ಸಮನ್ವಯ ಯೋಗ, ಶರಣಪಥದರ್ಶನ, ವಿದುರನೀತಿ, ಚಿತ್ರಾಂಗದ, ಮೋಳಿಗೆ ಮಾರ ವಿಭುಚರಿತೆ(ನಾಟಕ), ಜಗದ್ಗುರು ಸಿದ್ಧಲಿಂಗೇಶ್ವರ ಶತಕ ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ಸುಶ್ರಾವ್ಯ ಕಾವ್ಯಗಳನ್ನು ರಚಿಸಿದಂತೆಯೇ ಲಿಖಿತವಾದ ಸರಸ ಸಾಹಿತ್ಯವನ್ನು ರಚಿಸುವ ಅವರ ಕಾವ್ಯಶಕ್ತಿ ಅನನ್ಯವಾದುದು. ಅವರ ಕೃತಿಗಳನ್ನು ಓದು ವುದರಿಂದ ಹತ್ತಾರು ಶಾಸ್ತ್ರ ಗ್ರಂಥಗಳನ್ನು ಓದಿದ ಅನುಭವ ವಾಗುತ್ತದೆ. ಮನದ ತುಂಬಾ ಬೆಳಕು ತುಂಬಿದಂತಾಗುತ್ತದೆ.

ಹೀಗೆ ದೊಡ್ಡಯ್ಯನವರ ಸಾಧನೆ ದೊಡ್ಡದು. ಲೋಕ ಜೀವನವನ್ನು ಬಿಡದೆ ವೃತ್ತಿ ಮತ್ತು ಪ್ರವೃತ್ತಿಗಳೆರಡನ್ನೂ ಮೇಳೈಸಿ, ಲೌಕಿಕ ಮತ್ತು ಪಾರಮಾರ್ಥಿಕಗಳೆರಡನ್ನೂ ಜೊತೆ ಜೊತೆಗಾಗಿ ಸಾಧಿಸಿದ ದೊಡ್ಡಯ್ಯನವರು ಮರೆಯಲಾಗದ ಮಹಾನು ಭಾವರು. ಅವರಿಗೆ ತಕ್ಕ ಸತಿ ಬಸವಾಂಬೆಯವರು. ಪತಿಯ ಮನದ ಜಾಡನ್ನು ಅರಿತು ಅವರ ಸಮನ್ವಯ ಸಾಧಕ ಬದುಕಿನ ಸಹಯಾತ್ರಿಕರಾಗಿದ್ದವರು. ಈ ಶರಣ ದಂಪತಿಗಳದು ತುಂಬು ಕುಟುಂಬ. ಈ ಶರಣ ದಂಪತಿಗಳಿಗೆ ನಾ.ಮ. ಬಸವರಾಜಯ್ಯ ನವರಾದಿಯಾಗಿ ೫ ಮಂದಿ ಗಂಡು ಮಕ್ಕಳು ಮತ್ತು ಇಬ್ಬರು ಹೆಣ್ಣುಮಕ್ಕಳು. ಆದರ್ಶವಾದ ತುಂಬು ಬಾಳನ್ನು ನಡೆಸಿದ ದೊಡ್ಡಯ್ಯನವರು ೧೯೮೮ರಲ್ಲಿ ಶಿವೈಕ್ಯರಾದರು.

ಈ ಶರಣ ದಂಪತಿಗಳ ಪಾವನ ಬದುಕಿನ ಶರಣ ಸಂಸ್ಕೃತಿ ಸೌರಭವು ಅವರ ಮಕ್ಕಳ ಜೀವನದಲ್ಲೂ ತುಂಬಿ ಸೂಸುತ್ತಿದೆ ಎಂಬುದು ಸಂತೋಷಪಡಬೇಕಾದ ವಿಷಯ.

ದೊಡ್ಡಯ್ಯನವರ ದೊಡ್ಡವ್ಯಕ್ತಿತ್ವವನ್ನು ಕುರಿತು ಅನೇಕ ಕವಿಗಳು ಹಾಡಿದ್ದಾರೆ. ವಿಚಾರವಂತ ಲೇಖಕರು ಅವರ ಧನ್ಯ ಜೀವನದ ವಿವಿಧ ಆಯಾಮಗಳನ್ನು ಕುರಿತು ಬರೆದಿದ್ದಾರೆ.

*'ದೊಡ್ಡಗುಣದ ದೊಡ್ಡಯ್ಯ, ತ್ರಿಭಾಷಾಪುಂಗವ*
*ಶರಣರಲ್ಲಿ ಶರಣ ನಾಗರಹಾಳ ಮಹಾಶರಣ'.*
*'ಏನೆಂದು ಕರೆಯಲಿ ನಿನ್ನ ?*
*ಲೇಖಕ, ಅನುಭಾವಿ, ಭವರೋಗ ವೈದ್ಯ...*

ಇಂಥ ಮಾತುಗಳು ದೊಡ್ಡಯ್ಯನವರ ದಿವ್ಯವ್ಯಕ್ತಿತ್ವದ ಮುಂದೆ ಹೆಚ್ಚಿಟ್ಟ ನುಡಿಸೊಡರು!

ಮಹಾಶರಣ ದೊಡ್ಡಯ್ಯನವರ ಮಕ್ಕಳು ಶರಣ ಪರಂಪರೆಯ ಮುಂಗುಡಿಗಳಾಗಿ ಸಾಗಿದ್ದಾರೆ. ನಾಗರಹಾಳಿನ ಶರಣರ ಮಠವು ದೊಡ್ಡಯ್ಯಗಳು ಸಾಧನೆಗೈದ ಪವಿತ್ರಸ್ಥಳವಾಗಿ ನಿರಂತರ ಜ್ಞಾನದಾಸೋಹ ನಡೆಯುವ ಮಹಾಮನೆಯಾಗಿದೆ. ದೊಡ್ಡಯ್ಯಶಾಸ್ತ್ರಿಗಳ ಪ್ರಕಾಶನ ಸಂಸ್ಥೆಯೊಂದು ಅನುಭಾವದ ಅರಮಂಟಿಗೆಯಾಗಿ ಆರಂಭಗೊಂಡಿದೆ. ನಾಡವರಿಗೆ ಜ್ಞಾನಾನು ಭವಗಳನ್ನು ವಿತರಿಸುವ ಸುತ್ತ್ಯ ಸೇವೆ ನಡೆದಿದೆ. ✪





# ಕನ್ನಡದ ಹೊರೆ ಹೊತ್ತ ಗಳಗನಾಥರು

**ಅ**ವು ಮುಂಬಯಿ ಕರ್ನಾಟಕದ ಭಾಗದಲ್ಲಿ ಮರಾಠಿ ಅಲೆ ಪ್ರಬಲವಾಗಿದ್ದ ದಿನಗಳು. ಪೇಶ್ವೆಯವರ ಅವಧಿಯಲ್ಲಿ ಅನೇಕ ಮರಾಠಿ ಜಹಗೀರ ಮನೆತನಗಳು ಕರ್ನಾಟಕದ ಬೇರೆ ಬೇರೆ ಭೂಭಾಗಗಳನ್ನು ಆಳುತ್ತಿದ್ದವು. ಬ್ರಿಟಿಷರ ಕಾಲದಲ್ಲಿಯೂ ಮರಾಠಿ ವರ್ಚಸ್ಸು ಮುಂದುವರೆಯಿತು. ರಾಜಕೀಯ ಒತ್ತಡಕ್ಕೆ ಸಿಲುಕಿದ್ದರಿಂದ ಕನ್ನಡಿಗರು ಮರಾಠಿಗ ರನ್ನು ಅನುಸರಿಸುವ ಅನಿವಾರ್ಯತೆ ಇತ್ತು. ಎಲ್ಲ ಕಡೆ ಗಳಲ್ಲಿ ಮರಾಠಿ ಶಾಲೆಗಳು ತಲೆ ಎತ್ತಿದ್ದವು. ಮರಾಠಿ ಪತ್ರಿಕೆಗಳು ವ್ಯಾಪಕ ಪ್ರಚಾರ ಪಡೆದಿದ್ದವು. ಇಂಥ ಪರಿಸ್ಥಿತಿ ಯಲ್ಲಿ ಮರಾಠಿ ಸಂಮೋಹನದಿಂದ ಮರುಳಾಗಿದ್ದ ಕನ್ನಡಿಗ ರನ್ನು ತಮ್ಮ ಕಾದಂಬರಿಗಳ ಮೂಲಕ ಬಡಿದೆಚ್ಚರಿಸಿದ ಶ್ರೇಯಸ್ಸು ಕಾದಂಬರಿ ಪಿತಾಮಹರೆನಿಸಿದ ಗಳಗನಾಥರಿಗೆ ಸಲ್ಲುತ್ತದೆ.

ಗಳಗನಾಥರು ಕಾದಂಬರಿಗಳ ಮೂಲಕ ಕನ್ನಡಿಗರಲ್ಲಿ ವಾಚನಾಭಿರುಚಿಯನ್ನು ಹುಟ್ಟುಹಾಕಿದರು. ಅವರ 'ಸದ್ಬೋಧ ಚಂದ್ರಿಕೆ' ಮಾಸಪತ್ರಿಕೆಯಲ್ಲಿ ಧಾರವಾಹಿಯಾಗಿ ಮೂಡಿ ಬರುತ್ತಿದ್ದ ಗಳಗನಾಥರ ಕಾದಂಬರಿಗಳು ಓದುವ ಗುಂಗನ್ನು ಹೆಚ್ಚಿಸಿದವು. ಕನ್ನಡಿಗರ ಸ್ವದೇಶಾಭಿಮಾನವನ್ನು ಜಾಗೃತ ಗೊಳಿಸಿದವು.

ಗಳಗನಾಥರ ನಿಜವಾದ ಹೆಸರು ವೆಂಕಟೇಶ ತಿರುಕೋ(ತ್ರಿವಿಕ್ರಮ) ಕುಲಕರ್ಣಿ. ತಮ್ಮ ಮನೆತನವಿದ್ದ ಊರಿನ ಹೆಸರನ್ನೇ ಕರ್ತೃನಾಮವಾಗಿ ಇಟ್ಟುಕೊಂಡರು. ಗಳಗನಾಥರು ಜನಿಸಿದ್ದು ೧೮೬೯ರ ಜನವರಿ ೫ರಂದು. ಓದಿದ್ದು ಕಡಿಮೆ. ಮುಲ್ಕೀ ಪರೀಕ್ಷೆ ಮುಗಿಸಿ ಗಳಗನಾಥರು ಕನ್ನಡಾಭಿಮಾನದ ದೀಕ್ಷಾಮಂದಿರವಾಗಿದ್ದ ಧಾರವಾಡದ ಕನ್ನಡ ಟ್ರೈನಿಂಗ್ ಕಾಲೇಜನ್ನು ೧೮೮೬ರಲ್ಲಿ ಪ್ರವೇಶಿಸಿದರು. ಅಲ್ಲಿ ಅಧ್ಯಾಪಕರಾಗಿದ್ದ ಧೋಂಡೋ ನರಸಿಂಹ ಮುಳಬಾಗಲ ಮತ್ತು ರಾ.ಹ. ದೇಶಪಾಂಡೆ ಅವರು ಗಳಗನಾಥರ ಲೇಖನ ಕಲೆಗೆ ನೀರುಣಿಸಿದರು.

ಧಾರವಾಡದ ವಿದ್ಯಾವರ್ಧಕ ಸಂಘವು ಕನ್ನಡ ಗ್ರಂಥ ರಚನೆ ಹಾಗೂ ಪ್ರಸಾರಕ್ಕೆ ಕಟಿಬದ್ಧವಾಗಿತ್ತು. ಉತ್ತಮ ಕನ್ನಡ ಗ್ರಂಥಗಳಿಗೆ ಬಹುಮಾನದ ಕಿರೀಟ ತೊಡಿಸುತ್ತಿತ್ತು. ಗಳಗನಾಥರ ಪ್ರಥಮ ಕಾದಂಬರಿ 'ಪದ್ಮನಯನಾ' ರಚನೆ ಗೊಂಡಿದ್ದು ಈ ಹಿನ್ನಲೆಯಲ್ಲಿ 'ವಿದ್ಯಾವರ್ಧಕ ಸಂಘವು ಪಾರಿತೋಷಕದ ಆಸೆ ತೋರಿಸಿ ನನ್ನನ್ನು ಬರೆಯಲು ಹಚ್ಚಿತು' ಎಂದು ಒಂದೆಡೆ ಗಳಗನಾಥರು ಹೇಳಿಕೊಂಡಿದ್ದಾರೆ 'ಪದ್ಮನಯನಾ' ಕೃತಿಯು ಬಸವರಾಜ ಕಟ್ಟಿಮನಿಯಂತಹ ಲೇಖಕರನ್ನು ಸೃಷ್ಟಿಸಿತೆಂಬುದು ಉಲ್ಲೇಖನೀಯ.

ಕರ್ನಾಟಕ ವಿದ್ಯಾವರ್ಧಕ ಸಂಘವು ಪ್ರಕಟಿಸುತ್ತಿದ್ದ 'ವಾಗ್ಭೂಷಣ' ಮಾಸಪತ್ರಿಕೆಯ ಬರಹಗಾರರ ಬಳಗದಲ್ಲಿ ಗಳಗನಾಥರದು ಎದ್ದು ಕಾಣುವ ಹೆಸರು. ಈ ಪತ್ರಿಕೆಯು ಕನ್ನಡ ಲೇಖಕರನ್ನು ಮತ್ತು ಕನ್ನಡ ಓದುಗರನ್ನು ಚೆನ್ನಾಗಿ ಬೆಸೆಯಿತು.

ಗಳಗನಾಥರು ಶಿಕ್ಷಣ ಮುಗಿಸಿ ಶಿಕ್ಷಕರಾದರು. ಧಾರವಾಡ ಜಿಲ್ಲೆಯ ಶಿರಗುಪ್ಪಿ, ಬಂಕಾಪುರ, ಗುತ್ತಲಗಳಲ್ಲಿ ಸೇವೆ ಸಲ್ಲಿಸಿದರು. ಟ್ರೇನಿಂಗ್ ಕಾಲೇಜಿನಲ್ಲಿ ಅಧ್ಯಾಪಕ ಹುದ್ದೆಗೆ ಪದೋನ್ನತಿ ಲಭಿಸಿತು. ಆದರೆ ನೌಕರಿಗೆ ರಾಜೀನಾಮೆ ನೀಡಿ ಗಳಗನಾಥರು ಶ್ರೀ ಶೇಷಾಚಲ ಗುರು ಗಳ ಭಕ್ತರಾಗಿ ಆನಂದಮಠದಲ್ಲಿ ವಾಸವಾದರು. ಅಲ್ಲಿಯ ಸಂಸ್ಕೃತಪಾಠಶಾಲೆಯ ನಿರ್ವಹಣೆ ಮತ್ತು ಪ್ರಕಟಣಾ ಕಾರ್ಯ ದಲ್ಲಿ ತೊಡಗಿಕೊಂಡರು. ಗ್ರಂಥ ರಚನೆಯೂ ನಿರಂತರವಾಗಿ ಸಾಗಿತು. ಆಂಗ್ಲಭಾಷೆ, ಆಂಗ್ಲ ಜೀವನ ವಿಧಾನಗಳಿಗೆ ಆದ್ಯತೆ ನೀಡುತ್ತಿದ್ದ ಆ ಕಾಲದಲ್ಲಿ ಭಾಷಾರಕ್ಷಣೆ, ಸಂಸ್ಕೃತಿ ರಕ್ಷಣೆ ಗಾಗಿ ಗುರುಕುಲ ಪದ್ಧತಿಯನ್ನು ಆಚರಣೆಗೆ ತಂದರು.

ಆನಂದಮಠದ ಪಾಠಶಾಲೆಯಲ್ಲಿ ಕಾವ್ಯ, ಭಾಷೆ ಮುಂತಾದುವನ್ನು ಬೋಧಿಸಲು ಪಂಡಿತ ದಿಗ್ಗಜರನ್ನು ಆಮಂತ್ರಿಸಿದರು. ಸುಮಾರು ಎಂಭತ್ತು ವಿದ್ಯಾರ್ಥಿಗಳಿಗೆ ಊಟ, ವಸತಿಯನ್ನು ಒದಗಿಸುವ ಹೊಣೆ ಹೊತ್ತರು. ಈ ಪಾಠಶಾಲೆಯ ಖರ್ಚು ನಿರ್ವಹಿಸಲು ಗಳಗನಾಥರು 'ಸದ್ಬೋಧ ಚಂದ್ರಿಕೆ' ಮಾಸಪತ್ರಿಕೆಯನ್ನು ಪ್ರಾರಂಭಿಸಿ ಚಂದಾದಾರರ ಹಣದಿಂದ ಶಾಲೆ ನಡೆಸಿದರು. ಏಳು ಸಾವಿರ ಕ್ಕಿಂತ ಹೆಚ್ಚು ಚಂದಾದಾರರನ್ನು ಹೊಂದಿದ ಹಿರಿಮೆ 'ಸದ್ಬೋಧ ಚಂದ್ರಿಕೆ'ಯದಾಗಿತ್ತು.

ಆನಂದಮಠವಿದ್ದ ಆನಂದವನ ಒಂದು ಪುಟ್ಟ ಹಳ್ಳಿ. ಅಲ್ಲಿ 'ಸದ್ಬೋಧ ಚಂದ್ರಿಕೆ' ಮಾಸಪತ್ರಿಕೆಯ ಮುದ್ರಣ. ಸಹಸ್ರಾರು ಪ್ರತಿಗಳನ್ನು ಎತ್ತಿನಬಂಡಿಯಲ್ಲಿ ಹೇರಿಕೊಂಡು ಗಳಗನಾಥರು ೧೦ ಕಿ.ಮೀ. ದೂರದ ಗದಗದ ಅಂಚೆ ಕಛೇರಿಗೆ ಸಾಗಿಸುತ್ತಿದ್ದರು! 'ಸದ್ಬೋಧ ಚಂದ್ರಿಕೆ'ಯ ಪ್ರಸಾರವು ೨೭ ಜಿಲ್ಲೆಗಳಲ್ಲಿಯ ೧೬೦ ಸಬ್‌ಪೋಸ್ಟ್‌ಗಳಲ್ಲಿ ೧೨೦೦ ಊರುಗಳಲ್ಲಿ ಇದ್ದಿತಂತೆ! ಗಳಗನಾಥರ ಈ ಸಾಹಸವು ಕನ್ನಡ ಪತ್ರಿಕೋದ್ಯಮದ ಚರಿತ್ರೆಯಲ್ಲಿ ಅಪೂರ್ವ ಸಂಗತಿ ಎನಿಸಿದೆ.

ಜಾಗತಿಕ ಮಹಾಯುದ್ಧದ ಬಿಸಿ ಪತ್ರಿಕೆಗೂ ತಲುಪಿತು. ಮುದ್ರಣದ ವೆಚ್ಚ ಹೆಚ್ಚಿತು. ಆದರೆ ಗಳಗನಾಥರು ಮಾತ್ರ 'ಸದ್ಬೋಧ ಚಂದ್ರಿಕೆ'ಯ ಬೆಲೆಯನ್ನು ಹೆಚ್ಚಿಸಲಿಲ್ಲ. ಆದಾಗ್ಯೂ ಚಂದ್ರಿಕೆಯ ಚಂದಾದಾರ ಸಂಖ್ಯೆ ಕರಗತೊಡಗಿತು. ಗಳಗನಾಥರು ಪತ್ರಿಕೆಯನ್ನೂ, ಪಾಠಶಾಲೆಯನ್ನೂ ಕೈಬಿಡಬೇಕಾಗಿ ಬಂದಿತು. ಛಲಗಾರ ಗಳಗನಾಥರು ಹಾವೇರಿಗೆ ಬಂದು 'ಶ್ರೀ ಶೇಷಾಚಲ ವೇದ ಮತ್ತು ಸಂಸ್ಕೃತ ಪಾಠಶಾಲೆ'ಯನ್ನು ಆರಂಭಿಸಿದರು. 'ಗಳಗನಾಥ ಸುರಸ ಗ್ರಂಥಮಾಲೆ'ಯ ಮೂಲಕ ಕೃತಿಗಳನ್ನು ಹೊರತಂದರು. ಅವರು ನಿರೀಕ್ಷಿಸಿದ ಮಟ್ಟದಲ್ಲಿ ಪುಸ್ತಕಗಳು ಖರ್ಚಾಗಲಿಲ್ಲ. ಮುದ್ರಣಕ್ಕಾಗಿ ಮಾಡಿದ ಸಾಲದ ಹೊರೆ ಹೊರಲಾರದಂತೆ ಬೆಳೆಯಿತು. ಹೊಳೆಯ ನೀರು ಏರುವಂತೆ ಸಾಲದ ತೆರೆಗಳು ಅಪ್ಪಳಿಸ ತೊಡಗಿದವು. ಗಳಗನಾಥರು ಎದೆಗುಂದಲಿಲ್ಲ. ಬರೆಯುವುದನ್ನು ನಿಲ್ಲಿಸಿ ತಮ್ಮ ಪುಸ್ತಕಗಳ ಮೂಟೆಯನ್ನು ಹೊತ್ತುಕೊಂಡು ಮಾರಾಟಕ್ಕೆಂದು ಹೊರಬಿದ್ದರು!

ಹೊಸಗನ್ನಡ ಕಾದಂಬರಿ ಯುಗದ ಪ್ರವರ್ತಕ, ಕಾದಂಬರಿ ಪಿತಾಮಹ ಎಂಬ ಖ್ಯಾತಿಗೆ ಪಾತ್ರರಾಗಿದ್ದ ಅಗ್ರಗಣ್ಯ ಲೇಖಕನೊಬ್ಬ ಬರವಣಿಗೆಯನ್ನು ನಿಲ್ಲಿಸಿ, ತನ್ನ ಪುಸ್ತಕಗಳನ್ನು ಮಾರಾಟ ಮಾಡಲು ಬೀದಿಗೆ ಬಿದ್ದ ಸಂಗತಿ ಕನ್ನಡ ಸಾಹಿತ್ಯೇತಿಹಾಸದಲ್ಲಿ ದಾರುಣ ಘಟನೆ. ಆದರೆ ಲೇಖನ, ಪ್ರಕಾಶನ ಮತ್ತು ಮಾರಾಟ–ಇವು ಭಾಷಾಸೇವೆಯ ಅಂಗಗಳೇ ಎಂದು ತಿಳಿದುಕೊಂಡಿದ್ದ ಗಳಗನಾಥರಿಗೆ ಮಾರಾಟ ಬೇಸರವನ್ನುಂಟುಮಾಡಲಿಲ್ಲ.

ತಮ್ಮ ಅನಾರೋಗ್ಯದಲ್ಲಿಯೂ ಸಮಾರಂಭವೊಂದರಲ್ಲಿ ಭಾಗಿಯಾಗಿದ್ದ ನಗೆಸಾಹಿತಿ ಬೀಚಿ ಅವರಿಗೆ ಕನ್ನಡಿಗರೊಬ್ಬರು 'ಇಂತಹ ಅನಾರೋಗ್ಯದಲ್ಲಿಯೂ ದೂರದ ಊರಿಗೆ ಬಂದು ಕನ್ನಡದ ಸೇವೆ ಮಾಡುತ್ತಿರುವ ತಾವು ನಿಜಕ್ಕೂ ಗ್ರೇಟ್' ಎಂದು ನುಡಿದರಂತೆ. ಬೀಚಿ ಅವರು 'ನನ್ನನ್ನು ಗ್ರೇಟ್ ಅನ್ನಬಾರದಯ್ಯಾ, ಗ್ರೇಟ್ ಅನ್ನಬೇಕಾದದ್ದು ಗಳಗನಾಥರನ್ನು. ನಿಲ್ಲಲು ನೆಲೆಯಿಲ್ಲದೆ, ಮಲಗಲು ಸೂರಿಲ್ಲದೆ, ಉಡಲು ಬಟ್ಟೆಯಿಲ್ಲದೆ, ಉಣ್ಣಲು ಅನ್ನವಿಲ್ಲದೆ, ಮುಪ್ಪಿನ ದಿನಗಳನ್ನು ಊರೂರು ಅಲೆಯುತ್ತ ಪುಸ್ತಕದ ಮೂಟೆ ಹೊತ್ತು ಬೀದಿ ಬೀದಿ ತಿರುಗುತ್ತ, ಮನೆಮನೆಗೆ ಕನ್ನಡದ ಪುಸ್ತಕಗಳನ್ನು ಮುಟ್ಟಿಸಿದ ಆ ಗಳಗನಾಥರನ್ನ ಗ್ರೇಟ್ ಅನ್ನಬೇಕಯ್ಯಾ; ನನ್ನನ್ನಲ್ಲ' ಎಂದರಂತೆ.

ಇನ್ನೊಂದು ಸಂದರ್ಭ. ಮೈಸೂರು ಮಹಾರಾಜ ಕಾಲೇಜಿನ ಕರ್ನಾಟಕ ಸಂಘವು ಕನ್ನಡದ ಕಣ್ವ ಬಿ.ಎಂ.ಶ್ರೀ ಅವರ ಮಾರ್ಗದರ್ಶನದಲ್ಲಿ ಗಳಗನಾಥರಿಗೆ ಗೌರವ ಸಲ್ಲಿಸಿತು. ಅಂದು ನೀಡಲಾದ ಸನ್ಮಾನ ಪತ್ರದ ಕೆಲವು ಸಾಲುಗಳಿವು;

'... ಈಗ ಮೂವತ್ತು ವರ್ಷಗಳಿಂದಲೂ ಯಾವು ನಮ್ಮ ಸಾಹಿತ್ಯದ ಏಳ್ಗೆಗಾಗಿ ಶ್ರಮವೆಣಿಸದೆ ದುಡಿದಿದ್ದೀರಿ. ಕನ್ನಡಿಗರಲ್ಲಿ ಐಕ್ಯಮತ ಭಾವವನ್ನು ಬಲಪಡಿಸುವುದರಲ್ಲಿ ತಮ್ಮ ಕಾದಂಬರಿಗಳಲ್ಲಿ ವಿಶೇಷ ಸಹಾಯವು ದೊರೆತಿರುವುದನ್ನು ಇಲ್ಲಿ ಹೇಳದಿರಲಾರೆವು. ಉತ್ತರ ಕರ್ನಾಟಕದೊಡನೆ ಬಳಕೆ ನಮ್ಮ ಮೈಸೂರು ಕಡೆಯುವರಿಗೆ ಮುಖ್ಯವಾಗಿ ಉಂಟಾದುದು, ಅಲ್ಲಿಯ ಲೇಖಕರಲ್ಲಿ ಅಗ್ರಗಣ್ಯರಾದ ತಮ್ಮ ಮೂಲಕವೇ, ಪರಿಣತಿಯಿಂದಲೂ ಗ್ರಂಥ ಸಮೃದ್ಧಿಯಿಂದಲೂ ತಾವು ಅಖಿಲ ಕರ್ನಾಟಕಕ್ಕೆ ಪೂಜ್ಯರಾಗಿದ್ದೀರಿ, ಭೂಷಣರಾಗಿದ್ದೀರಿ...'.

ದುಡಿದು ದಣಿದ ಎಪ್ಪತ್ತರ ಇಳಿವಯಸ್ಸಿನ ದೇಹದೊಳಗೆ ಸದ್ದು ಮಾಡದೆ ದಾಳಿ ಇಟ್ಟವು ಕ್ಯಾನ್ಸರ್ ಕಣಗಳು. ೨೨ ಏಪ್ರಿಲ್ ೧೯೪೨ರಂದು ಗಳಗನಾಥರು ತಮ್ಮ ಪ್ರೀತಿಯ ಕನ್ನಡಿಗರನ್ನು ತೊರೆದು ದೂರದ ನೀಲದಲ್ಲಿ ಲೀನರಾದರು. ಅವರು ತಮ್ಮ ಕುಟುಂಬದವರಿಗೆ ಬಿಟ್ಟು ಹೋದ ಆಸ್ತಿಯೆಂದರೆ ಪುಸ್ತಕರಾಶಿ ಮಾತ್ರ. ಅವರ ಅಂತ್ಯಕ್ರಿಯೆ ಮತ್ತು ಅಪರಕರ್ಮದ ಕಾರ್ಯಗಳನ್ನು ನೆರವೇರಿಸಲು ಅವರ ಪುಸ್ತಕಗಳನ್ನು ಮಾರಿ ಹಣ ಸಂಗ್ರಹಿಸಲಾಯಿತು ಎಂಬುದು ಕಟು ಸತ್ಯ.

ಕೃಪೆ: ಕರ್ನಾಟಕ ಏಕೀಕರಣಕ್ಕೆ ದುಡಿದ ಮಹನೀಯರು.
ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು





# ಕನಕದಾಸರು : ಕೆಲವು ಚಿಂತನೆಗಳು

* –ಡಾ. ಜಿ.ಎಸ್. ಶಿವರುದ್ರಪ್ಪ

**ಚ**ರಿತ್ರೆಯ ಗತಿ ಯಾವಾಗಲೂ ಪ್ರಗತಿಗಾಮಿಯಾಗಿರುತ್ತದೆ ಎಂದು ಹೇಳಲು ಬಾರದು. ಸಾಂಪ್ರದಾಯಿಕವಾದ ಹಾದಿಯನ್ನು ತಿರಸ್ಕರಿಸಿ, ತನ್ನ ಕಾಲವನ್ನೂ ಮೀರಿ ಅದ್ಭುತವಾದ ಪ್ರಗತಿಪರ ಮನೋಧರ್ಮಕ್ಕೆ ಹೊರಳಿದ ಚರಿತ್ರೆ, ಇದಕ್ಕಿದ್ದ ಹಾಗೆ ಹಾಗೆ ಮತ್ತೆ ಹಿಮ್ಮರಳಿ ಸಂಪ್ರದಾಯಕ್ಕೇ ಜೋತುಬೀಳುವ ಸಂದರ್ಭಗಳೂ ಉಂಟು. ಕನ್ನಡ ಸಾಹಿತ್ಯ ಪರಂಪರೆಯ ಒಂದು ಹಂತದಲ್ಲಿ ಕಾಣಿಸಿಕೊಂಡ ವಚನ ಚಳುವಳಿ ಹಾಗೂ ಆನಂತರದ ಹರಿದಾಸ ಚಳುವಳಿ ಈ ಮಾತಿಗೆ ನಿದರ್ಶನವಾಗಿದೆ.



ವಚನ ಚಳುವಳಿಗಾಗಲಿ ಹರಿದಾಸ ಚಳುವಳಿಗಾಗಲೀ ಮೂಲ ಪ್ರೇರಣೆ ಒಂದೇ; ಅದು ಧರ್ಮಶ್ರದ್ಧೆ ಹಾಗೂ ಅದರ ಅಂಗವಾದ ಭಕ್ತಿ. ಒಂದಕ್ಕೆ ಹರಭಕ್ತಿ ಮೂಲದ್ರವ್ಯವಾದರೆ ಇನ್ನೊಂದಕ್ಕೆ ಹರಿಭಕ್ತಿ. ಆದರೆ ವಚನಕಾರರ ಆಂದೋಲನ ಸಂಪ್ರದಾಯವನ್ನು ಪ್ರಶ್ನಿಸಿದಷ್ಟು ಪ್ರತಿಭಟಿಸಿದಷ್ಟು ಮತ್ತು ವೈಚಾರಿಕವಾದಷ್ಟು, ದಿಟ್ಟತನವನ್ನು ಹರಿದಾಸ ಚಳುವಳಿ ತೋರಿಸಲಿಲ್ಲ. ವೈದಿಕ ಧರ್ಮದ ತಿರುಳಾದ ವರ್ಣಾಶ್ರಮ ಧರ್ಮವನ್ನು ಪರಿಶುದ್ಧವಾದ ವಿಷ್ಣುಭಕ್ತಿಯ ತಳಹದಿಯ ಮೇಲೆ ನಿಲ್ಲಿಸಿದ ಮಧ್ವಾಚಾರ್ಯರ ಸಿದ್ಧಾಂತದ ಪ್ರತಿಪಾದನೆಯನ್ನು ಉದ್ದೇಶವಾಗಿ ಉಳ್ಳ ಈ ಹರಿದಾಸ ಚಳುವಳಿ 'ಭಕ್ತಿ'ಯ ಮೇಲೆ ಒತ್ತು ಕೊಡುವ ಕಾರಣದಿಂದ, 'ವರ್ಣಾಶ್ರಮಧರ್ಮ'ದ ಚೌಕಟ್ಟಿನಲ್ಲಿಯೇ ಒಂದಷ್ಟು ಉದಾರತೆಯನ್ನು ತಂದಿತಾದರೂ, ತನಗಿಂತ ಹಿಂದಿನ ಶರಣ ಚಳುವಳಿಯಂತೆ, ವರ್ಣಾಶ್ರಮ ಧರ್ಮದ ಕಲ್ಪನೆಯನ್ನೇ ಮುರಿದು, ವ್ಯಕ್ತಿವ್ಯಕ್ತಿಗಳ ನಡುವಣ ತಾರತಮ್ಯವನ್ನು ತಿರಸ್ಕರಿಸಿ ಸಮಾನತೆಯನ್ನು ಪ್ರತಿಪಾದಿಸುವಷ್ಟು ಪ್ರಗತಿಗಾಮಿಯಾಗಲಿಲ್ಲ. ಇಂಥ ಒಂದು ಸಂದರ್ಭದಲ್ಲಿ, ಬಹು ಮಟ್ಟಿಗೆ ಪ್ರತಿಷ್ಠಿತ ಸಾಮಾಜಿಕ ವರ್ಗದವರಿಂದ ರೂಪುಗೊಂಡ ಈ ಆಂದೋಲನದಲ್ಲಿ, ಅಪ್ರತಿಷ್ಠಿತ ಸಾಮಾಜಿಕ ಸ್ತರದಿಂದ ಬಂದು ಸೇರಿಕೊಂಡ ಕನಕದಾಸರಂಥವರು, ಅಂದಿನ ಇತರ ಪ್ರಮುಖ ಹರಿದಾಸರೊಂದಿಗೆ ಅಥವಾ ಕೀರ್ತನಕಾರರೊಂದಿಗೆ ಹೆಗಲೆಣೆಯಾಗಿ ನಿಂತದ್ದು ಒಂದು ಆಶ್ಚರ್ಯವೇ ಸರಿ. ಅಷ್ಟೇ ಅಲ್ಲ. ಈ ಪ್ರತಿಷ್ಠಿತರ ಆಂದೋಲನದ ನಡುವೆ, ಅಪ್ರತಿಷ್ಠಿತ ವರ್ಗದ ಈ ಭಕ್ತ ತನ್ನ ವ್ಯಕ್ತಿ ವಿಶಿಷ್ಟತೆಗಾಗಿ ಎದುರಿಸಬೇಕಾಗಿ ಬಂದ ಸವಾಲುಗಳೂ ಸಂಘರ್ಷಗಳೂ ಸ್ವಾರಸ್ಯವಾಗಿವೆ.

ಕನಕದಾಸರ ವಿಶಿಷ್ಟತೆ ಇರುವುದು ಅವರು ದಾಸರಲ್ಲಿ (ಕೀರ್ತನಕಾರರಲ್ಲಿ) ಕವಿಗಳು ಎಂಬ ಸಂಗತಿಯಲ್ಲಿ. ಇದೇ ದಾಸಪರಂಪರೆಯ ಇತರರಿಂದ ಅವರನ್ನು ಪ್ರತ್ಯೇಕಿಸುವ ಲಕ್ಷಣವಾಗಿದೆ. ಅವರು ತಮ್ಮ ಕೀರ್ತನೆಗಳ ಮೂಲಕ ಅಂದಿನ

**ಮೂರ್ತದ ಮೂಲಕ ಅಮೂರ್ತವನ್ನೂ, ಅಕ್ಷರದ ಮೂಲಕ ಅರಿವನ್ನು, ವ್ಯಕ್ತಿಯ ಮೂಲಕ ಶಕ್ತಿಯನ್ನು, ಜೀವನ ಮೂಲಕ ದೇವನನ್ನೂ ಕಾಣಲು ಸಾಧ್ಯವಿದೆ ಎಂದು ತಿಳಿಸಿದ ಶರಣರು ನಿತ್ಯವೂ ಒಳಹೊರಗನ್ನು ಸ್ವಚ್ಛಗೊಳಿಸಿಕೊಳ್ಳುವ ಕ್ರಿಯೆಗೆ ಹೆಚ್ಚಿನ ಮಹತ್ವ ನೀಡಿದರು. - ಡಾ. ಬಸವರಾಜ ಸಬರದ**

ಹರಿದಾಸ ಪರಂಪರೆಯಲ್ಲಿ ಸುಭದ್ರವಾದ ಸ್ಥಾನವನ್ನು ಗಳಿಸಿಕೊಂಡಂತೆಯೇ, ತಮ್ಮ ಕಾವ್ಯ ನಿರ್ಮಿತಿಯಿಂದ ಕನ್ನಡ ಸಾಹಿತ್ಯ ಪರಂಪರೆಯಲ್ಲಿಯೂ ವಿಶಿಷ್ಟವಾದ ಸ್ಥಾನವನ್ನು ಗಳಿಸಿಕೊಂಡಿದ್ದಾರೆ. ಎರಡನೆಯದಾಗಿ, ಕೀರ್ತನಕಾರರಾದ ಅವರು, ಆ ಸಂಪ್ರದಾಯದ ಇತರರಂತೆ ಕೇವಲ 'ಮಾಧ್ವಭಕ್ತಿ' ಹಾಗೂ ಸಿದ್ಧಾಂತಗಳಿಗೆ ಕಟ್ಟುಬೀಳದೆ, ಒಂದು ಉದಾರವಾದೀ ಧಾರ್ಮಿಕ ನಿಲುವನ್ನು ಪ್ರಕಟಿಸುತ್ತಾರೆ. ತಾವು 'ಕುರುಬರು' ಎಂಬ ಬಗ್ಗೆ ಯಾವುದೇ ಕೀಳರಿಮೆ ಇಲ್ಲದೆ, ತಮ್ಮ ಭಕ್ತಿಯ ನಿಲುವನ್ನು–

*ನಾವು ಕುರುಬರು ನಮ್ಮ ದೇವರು ಬೀರಯ್ಯ*
*ಕಾವ ನಮ್ಮಜ್ಜ ನರಕುರಿಯ ಹಿಂಡುಗಳ ॥*

ಎಂಬಂಥ ರೂಪಕದಲ್ಲಿ ಹೇಳಬಲ್ಲವರಾಗಿದ್ದಾರೆ. ಭಕ್ತ ಭಗವಂತನ ಸಂಬಂಧವನ್ನು, ಕುರಿ ಕುರುಬ ರೂಪಕದಲ್ಲಿ ಹೇಳುವುದು ಕನಕದಾಸರಂಥವರಿಗೆ ಮಾತ್ರ ಸಾಧ್ಯ. ಈ ಬಗೆಯ ಅವೈದಿಕ ಪರಂಪರೆಯ ಪ್ರತೀಕಗಳನ್ನು ಬೇರೆಯವರು ಕೊಡಲಾರರು. ವೈದಿಕ ಸಂಪ್ರದಾಯದ ಕೀರ್ತನಕಾರರ ಅಭಿವ್ಯಕ್ತಿ ಏನಿದ್ದರೂ 'ಗೋವು', 'ಗೋಪಾಲಕ'ನ ರೂಪಕದ ಮೂಲಕ ಸಾಧ್ಯ. ಕನಕದಾಸರು, ಈ ಕೀರ್ತನೆಯಲ್ಲಿ ಈ ರೂಪಕವನ್ನು ವಿಸ್ತರಿಸುವ ಕ್ರಮವೂ ತುಂಬಾ ಸ್ವಾರಸ್ಯವಾಗಿದೆ. ಅವರ ಶೂದ್ರತ್ವಕ್ಕೆ ಸಾಕ್ಷಿಯಾಗಿದೆ. ಹಾಗೆಯೇ 'ದೇವೀ ನಮ್ಮ ದ್ಯಾವರು ಬಂದರು ಬನ್ನಿರೇ ನೋಡಬನ್ನಿರೇ' ಎಂಬ ಧಾಟಿಯ ಮತ್ತು ಗ್ರಾಮ್ಯ ಭಾಷೆಯಲ್ಲಿ ಅವರು ಬರೆದ ಇನ್ನೂ ಹಲವು ಕೀರ್ತನೆಗಳನ್ನು ನೋಡಿದಾಗ ಮತ್ತು ರಾಮಧಾನ್ಯ ಚರಿತೆಯ ವಸ್ತುನಿರ್ವಹಣೆಯನ್ನು ಗಮನಿಸಿದಾಗ, ಕನಕದಾಸರು ಅಂದಿನ ಅಪ್ರತಿಷ್ಠಿತ ಸಾಮಾಜಿಕ ಸ್ತರದಿಂದ ಬಂದ ಏಕೈಕ ಕೀರ್ತನಕಾರರು ಎಂಬುದು ಖಚಿತವಾಗುತ್ತದೆ.

ಇದರಿಂದಾಗಿ ಅವರು ವೈಚಾರಿಕವಾಗಿ ಹಾಗೂ ಸಾಮಾಜಿಕವಾಗಿ ಎದುರಿಸಬೇಕಾಗಿ ಬಂದ ಬಿಕ್ಕಟ್ಟುಗಳು, ಹಾಗೂ ಸಂಘರ್ಷಗಳು ಕಡಿಮೆಯೇನಲ್ಲ. ಇವು ಅವರ ಕೀರ್ತನೆ ಗಳಲ್ಲಿ ಮತ್ತು ಅವರನ್ನು ಕುರಿತ ಐತಿಹ್ಯಗಳಲ್ಲಿ ಕಾಣಿಸಿಕೊಂಡಿವೆ. ಒಂದೆಡೆ,

*ಕನಕದಾಸನ ಮೇಲೆ ದಯಮಾಡಲು ವ್ಯಾಸ*
*ಮುನಿ ಮಠಿಕರೆಲ್ಲ ದೂರುತಿಹರೋ ॥*

ಎಂಬ ಪುರಂದರದಾಸರ ಕೀರ್ತನೆಯ ದಾಖಲೆಯಲ್ಲಿ, ಗುರು ವ್ಯಾಸರಾಯರು 'ಶೂದ್ರನಾದ ಕನಕದಾಸರ ಮೇಲೆ ವಿಶೇಷ ಪ್ರೀತಿ ತೋರಿಸಿದ ಕಾರಣದಿಂದ, ಅಂದಿನ ಸಂಪ್ರದಾಯಸ್ಥ ಬ್ರಾಹ್ಮಣರು ತೋರಿದ ಪ್ರತಿಕ್ರಿಯೆಯ ಚಿತ್ರವೊಂದು ಬಿಚ್ಚಿಕೊಳ್ಳುತ್ತದೆ. ಇಂಥ ಸಂದರ್ಭದಲ್ಲಿಯೇ

*ಕುಲ ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ*
*ಕುಲದ ನೆಲೆಯನೇನಾದರೂ ಬಲ್ಲಿರಾ ? ॥*
*ಆತ್ಮ ಯಾವ ಕುಲ ಜೀವ ಯಾವ ಕುಲ*
*ತತ್ವೇಂದ್ರಿಯಗಳ ಕುಲ ಪೇಳಿರಯ್ಯ ॥*
*ಆತ್ಮಾಂತರಾತ್ಮ ನೆಲೆಯಾದಿ ಕೇಶವ*
*ಆತನೊಲಿದ ಮೇಲೆ ಯಾತರ ಕುಲವಯ್ಯಾ ?*

ಎಂಬುದು ಪ್ರಶ್ನೆ ಮಾಡುವುದರ ಮೂಲಕ ತಮ್ಮ ಪ್ರತಿಭಟನೆಯನ್ನು ದಾಖಲು ಮಾಡುತ್ತ, ತಮ್ಮ ವ್ಯಕ್ತಿತ್ವದ ಪರಿಚಯ ಮಾಡಿಕೊಡುತ್ತಾರೆ.

ಅವರ ಬಗ್ಗೆ ಪ್ರಚಲಿತವಾದ ಒಂದೆರಡು ದಂತಕತೆಗಳು ಅವರು ಏರಿದ ಎತ್ತರವನ್ನು ಸೂಚಿಸುತ್ತವೆ. ಬಾಳೆಯಹಣ್ಣನ್ನು ಯಾರೂ ಇಲ್ಲದೆಡೆ ತಿಂದು ಬನ್ನಿ ಎಂದು ಗುರುಗಳು ತಮ್ಮ ಶಿಷ್ಯರಿಗೆ ಹೇಳಿದಾಗ, ಆ ಹಣ್ಣನ್ನು ತಿನ್ನದೇ ತಮ್ಮ ಮುಂದೆ ಬಂದ ಶಿಷ್ಯ ಕನಕದಾಸನ ತಿಳುವಳಿಕೆಯನ್ನು ಗುರುವ್ಯಾಸರಾಯರು ಮೆಚ್ಚಿಕೊಂಡದ್ದಾಗಲಿ, ಯಾರು ಮೊದಲು ವೈಕುಂಠಕ್ಕೆ ಹೋಗಬಲ್ಲರು ಎಂದು ಕನಕದಾಸನನ್ನು ಗುರುಗಳು ಪ್ರಶ್ನಿಸಿದಾಗ 'ನಾನು ಹೋದರೆ ಹೋಗಬಹುದು' ಎಂದ ಉತ್ತರದ ಮೂಲಕ ಕನಕದಾಸರು ಸೂಚಿಸಿದ ಅಹಂ ನಿರಸನದ ಸಂಗತಿಯಾಗಲಿ ಕನಕದಾಸರ ತತ್ವಜ್ಞಾನಕ್ಕೆ ಸಾಕ್ಷಿಯಾಗಿವೆ. ಉಡುಪಿಯ 'ಕನಕನ ಕಿಂಡಿ'ಯ ಪ್ರಸಂಗವಂತೂ, ಸಾಮಾಜಿಕವಾಗಿ ಅಂದಿನ ಪ್ರತಿಷ್ಠಿತ ವರ್ಗದವರ ಧೋರಣೆಗೆ ಅರ್ಥವತ್ತಾದ ಒಂದು ಪ್ರತೀಕವಾಗಿದೆ. ವಚನ ಚಳುವಳಿಯ ಸಂದರ್ಭದಲ್ಲಿ ಈ ಬಗೆಯ ಧೋರಣೆಯನ್ನು ಪ್ರತಿಭಟಿಸಲೆಂದೇ, ಶರಣರು ದೇವಸ್ಥಾನಗಳನ್ನು ನಿರಾಕರಿಸಿದರು ಮತ್ತು ಕನಕದಾಸರಂಥವರು, ವಚನಕಾರರ ಚಳುವಳಿಯ ಸಂದರ್ಭದಲ್ಲಿ ಬದುಕಿದ್ದರೆ, ಈ ಬಗೆಯ ಪ್ರಸಂಗಗಳೇ ಉದ್ಭವಿಸುತ್ತಿರಲಿಲ್ಲವೆಂಬ ಸಂಗತಿಯನ್ನು

> ಅಲ್ಲಮನ ವಚನಗಳು ಮುಡಿಕಿಡಿಗಳಾದರೆ ಅಕ್ಕನ ವಚನಗಳು ಮುಡಿಕುಸುಮಗಳು. ನಿಜಗುಣರ ಗೀತೆಗಳೋ ಹೃದಯದ ಹಾಡುಗಳು. - ಡಾ. ಪ್ರಧಾನ ಗುರುದತ್ತ





ನೆನೆದರೆ, ಈ ಎರಡು ಕಾಲಮಾನಗಳ ನಡುವಣ ವ್ಯತ್ಯಾಸದ ಸ್ವರೂಪ ಸ್ವಯಂ ಸ್ಪಷ್ಟವಾಗುತ್ತದೆ. ಇಂಥ ಪರಿಸರದ ನಡುವೆಯೂ ಕನಕದಾಸರು ತಮ್ಮ ದಾರಿಯನ್ನು ತಾವೇ ಕಂಡುಕೊಂಡವರು. ಒಂದು ಕೀರ್ತನೆಯಲ್ಲಿ

*ಎಲ್ಲಾರು ಮಾಡುವುದು ಹೊಟ್ಟೆಗಾಗಿ*
*ಗೇಣು ಬಟ್ಟೆಗಾಗಿ – ತುತ್ತು ಹಿಟ್ಟಿಗಾಗಿ ॥*

ಎಂಬ ಲೋಕಜೀವನವನ್ನು ವ್ಯಾಖ್ಯಾನ ಮಾಡುತ್ತಾ, ಅದೇ ಕೀರ್ತನೆಯ ಕೊನೆಯ ಚರಣಗಳಲ್ಲಿ–

*ಉನ್ನತಕಾಗಿನೆಲೆಯಾದಿ ಕೇಶವನ ಧ್ಯಾನವನ್ನು*
*ಮನಮುಟ್ಟಿ ಮುಕ್ತಿಗಾಗಿ ಆನಂದಕ್ಕಾಗಿ*

ಎನ್ನುತ್ತಾರೆ. ಈ ಕೀರ್ತನೆಯ ಮೊದಲ ಚರಣಗಳ ಮೂಲಕ ವಿವರಿತವಾಗುವ ಲೋಕ ಜೀವನ ಹಾಗೂ ಕೊನೆಯ ಚರಣಗಳ ಮೂಲಕ ಸೂಚಿತವಾಗುವ ಉದ್ದೇಶ, ಈ ಎರಡೂ ಮನುಷ್ಯನ ಅಸ್ತಿತ್ವದ, ಅಂದರೆ 'ಇರುವ' ಹಾಗೂ ನಿಜವಾಗಿ 'ಇರಬೇಕಾದ' ಎರಡು ನೆಲೆಗಳನ್ನು ಹೆಸರಿಸುತ್ತದೆ.

ಮೊದಲ ನೆಲೆಯಿಂದ ಅಂದರೆ 'ಹೊಟ್ಟೆಗಾಗಿ', 'ಗೇಣು ಬಟ್ಟೆಗಾಗಿ' ಬದುಕುವ ಹಂತದಿಂದ, 'ಮುಕ್ತಿಗಾಗಿ ಆನಂದಕ್ಕಾಗಿ' ಬದುಕುವ ಹಂತಕ್ಕೆ ಏರಬೇಕಾದರೆ ಇರುವ ಸಾಧನವೆಂದರೆ 'ಉನ್ನತ ಕಾಗಿನೆಲೆಯಾದಿ ಕೇಶವನ ಧ್ಯಾನವನ್ನು ಮನಮುಟ್ಟಿ' ಮಾಡುವ ಧರ್ಮಶ್ರದ್ಧೆ ಅಥವಾ ಭಕ್ತಿ. ಈ ನೆಲೆಯಲ್ಲಿಯೇ ವ್ಯಕ್ತಿ ಬೇರೊಂದು ಅಧಿದೈವಕ್ಕೆ ದಾಸನಾಗುತ್ತಾನೆ. ಹೀಗೆ ತನಗಿಂತ ದೊಡ್ಡದಾದ ದೈವಕ್ಕೆ 'ದಾಸ'ನಾಗುವುದು ಅಥವಾ ಶರಣಾಗುವುದೆಂದರೆ ವಾಸ್ತವವನ್ನು, ಹಾಗೂ ವಾಸ್ತವದ 'ಅಧೀನತೆ'ಗಳನ್ನು ಮೀರುವುದು. ಈ 'ಅಧೀನತೆ'ಗಳನ್ನು ಮೀರುವುದರಿಂದ ಒದಗುವ ದಿಟ್ಟತನ, ಪ್ರತಿಭಟನೆಯ ಕೆಚ್ಚು, ಸಂಪ್ರದಾಯ ವಿರೋಧೀ ಧೋರಣೆಗಳು, ಸ್ವಾತ್ಮ ವಿಮರ್ಶೆ ಮತ್ತು ಲೋಕವಿಮರ್ಶೆ, ಸಾಮಾನ್ಯ ಜನದೊಂದಿಗೆ ಬೆರೆಯುವ ಹಾಗೂ ಅವರಿಗೆ ಅರ್ಥವಾಗುವ ಭಾಷೆಯ ಮೂಲಕ ಪಾರಮಾರ್ಥವನ್ನು ತಿಳಿಸುವ ಲಕ್ಷಣಗಳು ವ್ಯಕ್ತಿತ್ವದೊಳಕ್ಕೆ ಮೈಗೂಡಿಕೊಳ್ಳುತ್ತವೆ. ಅಂದಿನ ಭಕ್ತಿಪಂಥದ ಕೊಡುಗೆಯಾದ ಈ ಎಲ್ಲ ಲಕ್ಷಣಗಳೂ ಕನಕದಾಸರ ವ್ಯಕ್ತಿತ್ವದಲ್ಲಿ ಮೇಳವಿಸಿದೆ. ✪

## ಕನ್ನಡನುಡಿ

ಒಲವಿನ ನಲುವಿನ ಕನ್ನಡ ನುಡಿಯು
ಬೆಡಗಿನ ಸೊಬಗಿನ ಕನ್ನಡ ನುಡಿಯು
ಎಲ್ಲರ ಮನೆ ಮನದ ಕನ್ನಡ ನುಡಿಯು ।೧।

ಅನ್ನವ ನೀಡುವ ಕನ್ನಡ ನುಡಿಯು
ಬಾನಂಗಳ ಬೆಳಗುವ ಕನ್ನಡ ನುಡಿಯು
ಧೀಮಂತ ನುಡಿಯು ಕನ್ನಡ ನುಡಿಯು ।೨।

ಕವಿ ಪುಂಗವರ ಹೆಮ್ಮೆಯ ನುಡಿಯು ಕನ್ನಡನುಡಿಯು
ವೇದ–ವ್ಯಾಸರ ನುಡಿಯು ಕನ್ನಡ ನುಡಿಯು
ಎಲ್ಲರ ಮನೆ–ಮನ ಬೆಳಗುವ ನುಡಿಯು ಕನ್ನಡನುಡಿಯು ॥೩॥

ತಾಯಿ ಭುವನೇಶ್ವರಿಯ ನುಡಿಯು ಕನ್ನಡ ನುಡಿಯು
ಚಿನ್ನದ ನುಡಿಯು ಕನ್ನಡ ನುಡಿಯು
ಎಲ್ಲರಂಗಳದ ರಂಗೋಲೆ ನುಡಿಯು ಕನ್ನಡನುಡಿಯು ।೪।

ಅಳುವ ಕಂದಮ್ಮಗಳ ಜೋಗುಳ ನುಡಿಯು
ಕನ್ನಡನುಡಿಯು
ನುಡಿ ಮುತ್ತಿನ ಕಣಜವು ಕನ್ನಡನುಡಿಯು
ಮುತ್ತೈದೆಯರ ಸಿಂಧೂರವು ಈ ಕನ್ನಡನುಡಿಯು ।೫।

–ಶ್ರೀ ಶಂಕರಾಚಾರ್ಯ ಕಾ. ಕಮ್ಮಾರ
ಹಿರೇಮೊರಬ, ಹಿರೇಕೆರೂರು ತಾ., ಹಾವೇರಿ ಜಿಲ್ಲೆ.

## ಶ್ರೀವಾಣಿ

ಮನುಷ್ಯ ಸದಾ ತನ್ನನ್ನು ತಾನು ವಿಮರ್ಶಿಸಿಕೊಳ್ಳುತ್ತಿರಬೇಕು. ಯಾವಾಗ ಮನುಷ್ಯ ತನ್ನನ್ನು ತಾನು ಸುಧಾರಿಸಿಕೊಳ್ಳುವನೋ ಆಗ ಮಾತ್ರ ತಾನು ಯೋಗ್ಯನಾಗಿ ಬಾಳಿ ಜಗತ್ತಿನಲ್ಲಿ ಪ್ರೇಮದ ಬಾಳನ್ನು ಬಾಳುವುದು ಸಾಧ್ಯವಾಗುವುದು.

> ಧ್ಯಾನವೆಂದರೆ ತೂಕಡಿಕೆ ಅಲ್ಲ, ಆಲಸ್ಯವಲ್ಲ, ಒಂದು ಸಾವಧಾನ ಸ್ಥಿತಿ- ನಾಗತಿಹಳ್ಳಿ ಚಂದ್ರಶೇಖರ್

# ಘನತತ್ವಕ್ಕೆ ಮನಸೋತ ಜೀವ

-ಡಾ. ಗುರುರಾಜ ಕರ್ಜಗಿ

ನವೆಂಬರ್ ಒಂದರಂದು ನಮಗೆ ಎಲ್ಲಿಲ್ಲದ ಕನ್ನಡ ಪ್ರೀತಿ ಉಕ್ಕಿ ಬರುತ್ತದೆ. ಆ ದಿನ ಅಬ್ಬರದ ಕಾರ್ಯಕ್ರಮಗಳು, ಭಾಷಣಗಳು, ಸಂಗೀತ ಮತ್ತು ನೃತ್ಯಗಳ ಪ್ರದರ್ಶನಗಳು ನಡೆಯುತ್ತವೆ. ಅದೆಲ್ಲ ಬೇಕು ನಿಜ. ಆದರೆ ಕರ್ನಾಟಕ ಏಕೀಕರಣಕ್ಕೆ ದುಡಿದ, ಜೀವ ಸವೆಸಿದ ಮಹಾನುಭಾವರ ನೆನಪು ಮಾಡಿಕೊಳ್ಳಬೇಕಲ್ಲವೇ? ತಮ್ಮ ಬದುಕನ್ನೇ ಕನ್ನಡಲ್ಲಿ ಶಿಕ್ಷಣಕ್ಕಾಗಿ, ಕನ್ನಡ ಸಾಹಿತ್ಯಕ್ಕಾಗಿ, ಕನ್ನಡದಲ್ಲಿ ಆಡಳಿತಕ್ಕಾಗಿ ಸವೆಸಿದ, ಕನ್ನಡದ ಹುಲಿಯೆಂದೇ ಕರೆಯಿಸಿಕೊಳ್ಳುತ್ತಿದ್ದ ಧೀಮಂತ ಡೆಪ್ಯುಟಿ ಚೆನ್ನಬಸಪ್ಪ ಅವರು ಹುಟ್ಟಿದ್ದು ನವೆಂಬರ್ ಒಂದು. ೧೮೩೩ರಂದು. ಆದ್ದರಿಂದ ಪ್ರತಿ ನವೆಂಬರ್ ಒಂದರಂದು ಡೆಪ್ಯುಟಿ ಚೆನ್ನಬಸಪ್ಪನವರನ್ನು ಯಾರಾದರೂ ಸ್ಮರಿಸಿದರೆ ರಾಜ್ಯೋತ್ಸವ ಸಾರ್ಥಕವಾಗುತ್ತದೆ. ಧಾರವಾಡದಲ್ಲಿ ಹುಟ್ಟಿದ ಚೆನ್ನಬಸಪ್ಪನವರು ಇಂಗ್ಲಿಷ್ ಕಲಿಯಬೇಕೆಂದು ಬಯಸಿದರು. ಆಗ ಇಂಗ್ಲಿಷ್ ಕಲಿಯಲು ಮುಂಬೈಗೋ, ಪುಣೆಗೋ ಹೋಗಬೇಕಿತ್ತು. ಮನೆಯಲ್ಲಿ ವಿರೋಧವಿದ್ದರೂ ಹುಡುಗನ ಛಲ ಕುಂದಲಿಲ್ಲ. ಒಂದು ದಿನ ರಾತ್ರಿ ತಾಯಿಯ ಹಣದ ಪೆಟ್ಟಿಗೆಯಲ್ಲಿದ್ದ ಮೂರು ರೂಪಾಯಿ ಹತ್ತು ಆಣೆ ಗಳನ್ನು ತೆಗೆದುಕೊಂಡು ಗೋಕಾಕಕ್ಕೆ ಹೋದರು. ನಂತರ ಅಲ್ಲಿದ್ದ ಪರಿಚಯದವರಿಂದ ಐವತ್ತು ರೂಪಾಯಿ ಪಡೆದು ಕೊಂಡು ಸುಮಾರು ನಾಲ್ಕು ನೂರು ಕಿಲೋಮೀಟರ್ ದಾರಿಯನ್ನು ನಡೆದು ಸವೆಸಿ ಪುಣೆ ಸೇರಿದರು. ಅಲ್ಲಿಯೇ ನೆಲೆಸಿ ಕಾಲೇಜು ಸೇರಿ ಪದವಿ ಪಡೆದು ಅದೇ ಕಾಲೇಜಿನಲ್ಲಿ ಅಧ್ಯಾಪಕರಾದರು. ೧೮೫೫ಕ್ಕೆ ಮರಳಿ ಧಾರವಾಡಕ್ಕೆ ಬಂದಾಗ ಸರಿಯಾದ ಕೆಲಸ ಸಿಗದೇ ಅಂಚೆ ಇಲಾಖೆ ಸೇರಿದರು. ಮುಂಬೈ ಸರಕಾರದ ಶಿಕ್ಷಣ ಇಲಾಖೆ ಪ್ರಾಥಮಿಕ ಶಿಕ್ಷಕರ ತರಬೇತಿ ಶಾಲೆಯನ್ನು ಧಾರವಾಡದಲ್ಲಿ ಪ್ರಾರಂಭಿಸಿ ದಾಗ ಅದನ್ನು ಸೇರಿ ೧೮೬೧ರಲ್ಲಿ ಅದರ ಪ್ರಿನ್ಸಿಪಾಲ ರಾದರು. ೧೮೬೪ರಲ್ಲಿ ಅದು ಕಾಲೇಜಾಗಿ ಪರಿವರ್ತಿತ ವಾದಾಗ ಚೆನ್ನಬಸಪ್ಪನವರು ಅದರ ಪ್ರಥಮ ಪ್ರಿನ್ಸಿಪಾಲ ರಾದರು. ೧೮೬೬ರಲ್ಲಿ ಡೆಪ್ಯುಟಿ ಎಜುಕೇಷನಲ್ ಇನ್ಸ್‌ಪೆಕ್ಟರ್ ಆದರು. ಮುಂದೆ ಅವರು ಹದಿನೈದು ವರ್ಷಗಳ ಕಾಲ ಮಾಡಿದ ಕೆಲಸ ಎಷ್ಟು ಜನಪ್ರಿಯವಾಗಿತ್ತೆಂದರೆ ಅವರ ಹೆಸರಿನ ಹಿಂದೆ ಡೆಪ್ಯುಟಿ ಅಂಟಿಕೊಂಡು ಬಿಟ್ಟಿತು. ೧೮೮೧ರಲ್ಲಿ ಡೆಪ್ಯುಟಿ ಚೆನ್ನಬಸಪ್ಪ ನವರು ತೀರಿಕೊಂಡಾಗ ಅವರಿಗೆ ಕೇವಲ ನಲವತ್ತೇಳು ವರ್ಷ ವಯಸ್ಸು.

ಅವರ ಪ್ರಾಮಾಣಿಕತೆ ಎಲ್ಲರಿಗೂ ಮಾದರಿಯಾಗಿತ್ತು. ಧಾರವಾಡದಲ್ಲಿ ಸಹಕಾರಿ ಪುಸ್ತಕ ಡಿಪೋದ ಜವಾಬ್ದಾರಿ ಇವರ ಮೇಲಿತ್ತು. ಅಲ್ಲಿದ್ದ ಗುಮಾಸ್ತ ಅಲ್ಲಲ್ಲಿ ತಪ್ಪು ಲೆಕ್ಕ ಬರೆಯುತ್ತ ಸುಮಾರು ಐದು ಸಾವಿರ ರೂಪಾಯಿಗಳನ್ನು ಬಳಸಿಕೊಂಡಿದ್ದ. ಅವನು ಪ್ರಾಮಾಣಿಕನೆಂದು ನಂಬಿ ಆ ದಾಖಲೆಗಳಿಗೆ ಚೆನ್ನಬಸಪ್ಪನವರು ಸಹಿ ಮಾಡುತ್ತಿದ್ದರು. ಒಮ್ಮೆ ಅವರೇ ಲೆಕ್ಕ ಪರಿಶೀಲಿಸುವಾಗ ಆ ತಪ್ಪು ಕಂಡಿತು. ತಕ್ಷಣ ಸರಕಾರಕ್ಕೆ ಚೆನ್ನಬಸಪ್ಪನವರು ಪತ್ರ ಬರೆದರು. ನಾನು ಗುಮಾಸ್ತನನ್ನು ನಂಬಿ ದಾಖಲೆಗಳ ಮೇಲೆ ಸಹಿ ಮಾಡಿದ್ದು ನನ್ನ ತಪ್ಪು. ಈ ನಷ್ಟವಾದ ಹಣಕ್ಕೆ ನಾನೇ ಜವಾಬ್ದಾರ. ಆದ್ದರಿಂದ ನನ್ನ ಪ್ರತಿ ತಿಂಗಳ ಸಂಬಳದಲ್ಲಿ ನನಗೆ ತೀರ ಅವಶ್ಯವಾದ ಅರವತ್ತು ರೂಪಾಯಿಗಳನ್ನು ಮಾತ್ರ ಕೊಟ್ಟು ಬಾಕಿ ಹಣವನ್ನು ಸರಕಾರವೇ ಉಳಿಸಿಕೊಳ್ಳ ತಕ್ಕದ್ದು. ಇದು ನಷ್ಟ ಭರಿಸುವವರೆಗೂ ನಡೆಯುತಕ್ಕದ್ದು. ಅವರಿಗೆ ಮೂಢನಂಬಿಕೆಗಳಲ್ಲಿ, ಆಡಂಬರಗಳಲ್ಲಿ ಒಂದಿಷ್ಟೂ ನಂಬಿಕೆ ಇರಲಿಲ್ಲ. ಉಳವಿಯಲ್ಲಿ ಸ್ವಾಮಿಗಳು ಅದ್ದೂರಿ ಯಾಗಿ ಗಣಾರಾಧನೆ ಮಾಡಿದರು. ಆ ಆಡಂಬರವನ್ನು ಸಹಿಸದ ಚೆನ್ನಬಸಪ್ಪನವರು ಪೂಜೆಗೆ ಹೋಗಲಿಲ್ಲ. ಅವರನ್ನು ಕರೆಸಿಕೊಂಡ ಸ್ವಾಮಿಗಳಿಗೆ ಹೇಳಿದರು. 'ಹೀಗೆ ಆಡಂಬರದಿಂದ ಏನಾಯಿತು? ಉಳವಿ ಪ್ರದೇಶ ಹೊಲಸಾಯಿತು. ಹೀಗೆ ಅಗತ್ಯವಿಲ್ಲದವರಿಗೆ ಊಟ ಹಾಕಿಸಿದ್ದು ವ್ಯರ್ಥ. ಅದರ ಬದಲು ವೀರಶೈವ ಸಮಾಜದ ಬಡಮಕ್ಕಳಿಗೆ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಬಹು ದಿತ್ತಲ್ಲ?' ಸ್ವಾಮಿಗಳು ಈ ಮಾತನ್ನು ಒಪ್ಪಿ ವೀರಶೈವ ವಿದ್ಯಾರ್ಥಿನಿಲಯಕ್ಕೆ ಪ್ರತಿ ತಿಂಗಳು ೩೦೦ರೂಪಾಯಿ ಕೊಡುತ್ತ ಬಂದರು. ಸ್ವಾಮಿಗಳು ವಿಧಿವಶ ರಾದ ನಂತರ ವಿದ್ಯಾರ್ಥಿನಿಲಯ ಕಷ್ಟದ ಸ್ಥಿತಿಗೆ ಬಂದಾಗ ಚೆನ್ನಬಸಪ್ಪ ನವರು ಸಾಲ ತೀರಿಸಲು ತಮ್ಮ ಮನೆ ಮಾರಿದರು. ಮಡದಿಯ ಎಲ್ಲ ಆಭರಣಗಳನ್ನು ಮಾರಿದರು. ಇದು ಅವರ ಸಾಮಾಜಿಕ ಕಳಕಳಿ. ಅವರಿಂದ ಸ್ಫೂರ್ತಿ ಪಡೆದ ವರು ಅನೇಕರು. ಚೆನ್ನಬಸಪ್ಪನವರಿಂದ ಪ್ರಭಾವಿತರಾದ ಅರಟಾಳ ರುದ್ರೇಗೌಡರು ಸ್ನೇಹಿತರೊಂದಿಗೆ ಕೆ.ಎಲ್.ಇ. ಸಂಸ್ಥೆ ಸ್ಥಾಪಿಸಿದರು. ಡಿ.ಸಿ. ಪಾವಟೆಯವರು ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳಾಗಿ ನಂತರ ಪಂಜಾಬಿನ ರಾಜ್ಯಪಾಲರಾದರು. ಫ.ಗು. ಹಳಕಟ್ಟಿಯವರು, ಗಂಗಾಧರ ಮಡಿವಾಳೇಶ್ವರ ತುರಮರಿಯವರು, ವೆಂಕಟರಂಗೋ ಕಟ್ಟಿಯವರಂಥ ಪ್ರತಿಭಾ ಶಾಲಿಗಳಿಗೆ ಪ್ರೇರಣೆ ನೀಡಿದವರು ಡೆಪ್ಯುಟಿ ಚೆನ್ನಬಸಪ್ಪನವರು. ಘನತತ್ವವೊಂದಕ್ಕೆ ದಿನರಾತ್ರಿ ಮನಸೋತು, ಬೇರೆ ಏನನ್ನೂ ನೆನೆಯದೆ, ಅದರ ಅನುಸಂಧಿ ಯಲ್ಲಿ ತಮ್ಮ ಜೀವಭಾರವನ್ನು ಮರೆತ ಒಂದು ಜೀವ ಹೇಗೆ ಸ್ಫೂರ್ತಿಯ ಸೆಲೆಯಾಗಬಹು ದೆಂಬುದಕ್ಕೆ ಡೆಪ್ಯುಟಿ ಚೆನ್ನಬಸಪ್ಪನವರೇ ಅದ್ಭುತ ಮಾದರಿ.

ಕೃಪೆ: ಪ್ರಜಾವಾಣಿ ೧೫-೦೭-೨೦೧೪





# ದ.ದ.ದ. ಇದು ಉಪನಿಷತ್ತಿನ ಬೋಧನ ಇದರ ಅನುಸಂಧಾನವೇ ಜೀವನ

-ತದ್ದಲಸೆ ವಿಘ್ನೇಶ್ವರ ಶರ್ಮ *

ಇದೊಂದು ಉಪನಿಷತ್ತಿನ ಕಥೆ

ಬ್ರಹ್ಮದೇವರು ತನ್ನ ಸೃಷ್ಟಿ ಕಾರ್ಯ ಮುಗಿಸಿದ ನಂತರ ಅವರ ತಿಳುವಳಿಕೆ-ನಡಾವಳಿಗಾಗಿ ಬೋಧನೆ ಮಾಡಲು ಪಾಠ ಶಾಲೆ ಆರಂಭಿಸಿದ. ದೇವತೆಗಳು, ರಾಕ್ಷಸರು, ಮನುಷ್ಯರು, ವಿದ್ಯಾರ್ಥಿಗಳಿಗೆ ಸೃಷ್ಟಿಯ ರಹಸ್ಯಗಳನ್ನು ತಿಳಿಸಿ ಹೇಗೆ ಬದುಕ ಬೇಕು, ಪರಸ್ಪರ ಹೇಗೆ ನಡೆದುಕೊಳ್ಳಬೇಕು. ಇತ್ಯಾದಿ ಅನೇಕ ಸಂಗತಿ ಸೂತ್ರಗಳನ್ನು ಬೋಧಿಸಿದ ನಂತರ ಕೊನೆಯದಾಗಿ 'ನೀವು ಮನೆಗೆ ತೆರಳುವ ಮುನ್ನ ನನ್ನನ್ನು ಕಾಣಬೇಕು. ನಿಮ ಗೊಂದು ಮಹತ್ವದ ಸಂದೇಶ ಹೇಳತಕ್ಕದ್ದಿದೆ ಅಂತ ಹೇಳಿದ. ಅವನ ಪಾಠಶಾಲೆಯಲ್ಲಿ ಕಲಿಯತಕ್ಕದ್ದನ್ನೆಲ್ಲ ಮುಗಿಸಿ ಎಲ್ಲರೂ ಅವನಲ್ಲಿಗೆ ಬಂದು ನಮಸ್ಕರಿಸಿ 'ನಾವು ಮನೆಗೆ ತೆರಳುತ್ತೇವೆ. ಕೊನೆಯದಾದ ಉಪದೇಶ ನೀಡಿ' ಅಂದರು. ಆಗ ಬ್ರಹ್ಮ ದೇವರು ದೇವತೆಗಳನ್ನು ಕರೆದು ನಿಮಗೆ ಕೊನೆಯ ಉಪದೇಶ 'ದ', ಇದನ್ನು ಮರೆಯಬೇಡಿ. ಇದರಿಂದಲೇ ನಿಮಗೆ ಶ್ರೇಷ್ಠ-ಜ್ಯೇಷ್ಠ ಸ್ಥಾನ ಲಭ್ಯ ಅಂದ. ಹಾಗೇ ರಾಕ್ಷಸರನ್ನು ಕರೆದು ನೀವು ಒಳ್ಳೆಯವರಾಗಿ ಬಾಳಿ. 'ದ', ಎಂಬ ಬೀಜಾಕ್ಷರ ಉಪದೇಶಿಸುವೆ. ಎಂದಿಗೂ ಮರೆಯಬೇಡಿ ಅಂದ. ಮನುಷ್ಯರನ್ನು ಕರೆದು ನಿಮಗೆ ನಾನು 'ದ', ಉಪದೇಶಿಸುತ್ತಿರುವೆ. ಅದರ ಅಂತರಂಗ ಅರಿತು-ಅರಗಿಸಿಕೊಂಡು ಬಾಳಿರಿ, ನಿಮಗೆ ಇದು ಕಲ್ಯಾಣಕಾರಿಯಾಗುತ್ತದೆ ಎಂದು ಹೇಳಿದ.

ಎಲ್ಲರೂ ಪಾಠಶಾಲೆಯ ಆವರಣದಿಂದ ಹೊರ ಬಂದರು. ಒಬ್ಬರ ಮುಖ ಮತ್ತೊಬ್ಬರು ನೋಡಿದರು. ಪ್ರಶ್ನಾರ್ಥಕ ದೃಷ್ಟಿ. ಯಾರಿಗೂ ಅದರ ಅರ್ಥವೇ ಆಗಿರಲಿಲ್ಲ. ಆಗ ದೇವತೆಗಳು ಮತ್ತೆ ಬ್ರಹ್ಮದೇವರ ಸಮೀಪಕ್ಕೆ ಬಂದರು.

'ಗುರುಗಳೇ, ನಮಗೆ ಉಪದೇಶಿಸಿದ ಅಕ್ಷರದ ಅರ್ಥ ವಾದರೂ ಏನು ? ತಿಳಿಸಿ' ಅಂದರು.

ಬ್ರಹ್ಮದೇವರು ಅವರನ್ನು ಸಮೀಪಕ್ಕೆ ಕರೆದು ಹೇಳಿದರು. 'ದ', ಅದು ಬೀಜಾಕ್ಷರ. ಸಂಜ್ಞಾಕ್ಷರವೂ ಆಗಿದೆ. ನೀವು ಭೋಗ ಪ್ರಿಯರು. ಅದರ ಅಪೇಕ್ಷೆ ಹಿತ-ಮಿತವಾಗಿರಬೇಕು. ನಿಮ್ಮ ಸ್ಥಾನ-ಗೌರವಕ್ಕೆ ತಕ್ಕ ರೀತಿಯಲ್ಲೇ ಇರಬೇಕು. **ದ ದಿಂದ ನೀವು ದಮ ಅಂತ ಅರ್ಥೈಸಿಕೊಳ್ಳಿ.** ಆಂತರಿಂದ್ರಿಯ ಬಹಿರಿಂದ್ರಿಯ ನಿಗ್ರಹವೇ ದಮ. ಭೋಗಗಳಿಗೆ ಕಡಿವಾಣ ಹಾಕುವುದು. ದಮನ ಮಾಡುವುದು. ಇದರಿಂದಲೇ ನಿಮ್ಮ ಸ್ಥಾನ-ಮಾನ ಸ್ಥಿರಗೊಳ್ಳುವುದು. ಸರಿ! ದೇವತೆಗಳು ನಿರ್ಗಮಿಸಿದರು.

ರಾಕ್ಷಸಗಣ ಆಗಮಿಸಿತು. ಅವರೂ ಹೀಗೆಯೇ ಕೇಳಿದರು. ಅವರಿಗೂ ಬ್ರಹ್ಮದೇವರು ಹೇಳಿದ.

ನೀವು **'ದ' ದಿಂದ ದಯೆ ಅಂತ ತಿಳಿದುಕೊಳ್ಳಿ.** ನಿಮ್ಮಲ್ಲಿ ಕ್ರೌರ್ಯ ಹೆಚ್ಚು. ನಿಮ್ಮನ್ನು ಕಂಡಾಗ ಇತರರಿಗೆ ಭೀತಿಯಾಗುತ್ತದೆ. ದಯಾಪರರಾದರೆ ಪ್ರೀತಿ ಬೆಳೆದು ಲೋಕವ್ಯವಹಾರಕ್ಕೆ ಜೀವ ಜಗತ್ತಿಗೆ ಕ್ಷೇಮ ನೆಮ್ಮದಿಯಾಗುತ್ತದೆ.

ಮಾನವರ ಸರದಿ ಬಂತು! ಕೈ ಜೋಡಿಸಿ ನಿಂತರು. ಗುರುಗಳಿಗೆ ಶರಣರಾಗಿ ಅದರ ಅರ್ಥವೇನು ಎಂದು ತಿಳಿಯ ಬಯಸಿದರು. ಆಗ ಬ್ರಹ್ಮದೇವರು ಹೇಳಿದ. ಮಾನವರೇ ನಿಮ್ಮಲ್ಲಿ ಸ್ವಾರ್ಥಪರತೆ ಹೆಚ್ಚು. ಇದಕ್ಕಾಗಿ ಕಚ್ಚಾಟ. ಎಲ್ಲವನ್ನು ಕೂಡಿಹಾಕುವ ಪ್ರವೃತ್ತಿ. ಇತರರೂ ನಮ್ಮಂತೆಯೇ ಬದುಕ ಬೇಕೆಂಬ ಬಯಕೆ ಇರಬೇಕು. **'ದ' ದಿಂದ ನೀವು ದಾನಶೀಲತೆ ಬೆಳೆಸಿಕೊಂಡರೆ ಶಾಂತಿ ಸುಖ-ಸಮೃದ್ಧಿ ದೊರೆಯುತ್ತದೆ.**

ಎಲ್ಲರೂ ತಮ್ಮ ತಮ್ಮ ಲೋಕಕ್ಕೆ ತೆರಳಿದರು.

ಈ ಕಥೆಯ ಮೂಲಕ ನಾವು ಅರಿಯಬೇಕಾದದ್ದೇನು ಎಂಬುದೇ ಇಲ್ಲಿ ಮುಖ್ಯ. ನಮ್ಮ ಬದುಕಿಗೆ ವ್ಯಕ್ತಿತ್ವದ ವಿಕಾಸಕ್ಕೆ ಇದೊಂದು ವ್ಯಾಖ್ಯೆಯೇ ಆಗಿದೆ. ನಾವು ಇತರರನ್ನು ಅಂತಃ

* ಹುಣಸೇಕೊಪ್ಪ ಅಂಚೆ, ಶಿರಸಿ, ಉತ್ತರ ಕನ್ನಡ ಜಿಲ್ಲೆ-೫೮೧ ೪೦೧.

**ಅವರವರಿಗವರ ಮನವೊಲಿದುದೇ ಬ್ರಹ್ಮ.. -ಸರ್ಪಭೂಷಣ ಶಿವಯೋಗಿ**

ಕರಣ ಪೂರ್ವಕವಾಗಿಯೇ ಪ್ರೀತಿಸಿ ಸ್ವಾರ್ಥರಹಿತ ಜೀವನ ನಡೆಸಿ ಸಹೋದರ ಭಾವನೆ ಬೆಳೆಸುವುದೇ ಇಲ್ಲಿ ಜೀವನಯೋಗ ವೆನ್ನಿಸುತ್ತದೆ. ದಾನವೆಂದರೆ ಪರಿಶುದ್ಧ ಮನಸ್ಸಿನ ಸ್ಪಂದನ. ಮಾನಸಿಕವಾಗಿ ಪರಸ್ಪರ ವಿಶ್ವಾಸ-ನಂಬಿಕೆಗಳ ಮೂಲಕ ಅನ್ಯರ ಅಗತ್ಯತೆ ತಿಳಿದು ನೀಡುವುದು, ಹೀಗೆ ಹೊಂದಿಕೊಳ್ಳುವಾಗ ಮನಸ್ಸು ಪ್ರಸನ್ನಗೊಳ್ಳುತ್ತದೆ. ತನ್ನಂತೆಯೇ ಪರರು ಎಂಬ ವಿಶಾಲ ಹೃದಯ-ಉದಾರ ಕ್ರಿಯೆ ಅಲ್ಲಿ ತೆರೆದುಕೊಳ್ಳುತ್ತದೆ. ಇದು ದಾನದ ಮೂಲಭೂತ ತತ್ವ-ಸಿದ್ಧಾಂತ.

ಕೇವಲ ಹಣ-ವಸ್ತುಗಳನ್ನು ತ್ಯಾಗ ಮಾಡುವುದು ಮಾತ್ರ ದಾನವೆಂದು ಹಲವರು ತಿಳಿದುಕೊಂಡಿರುತ್ತಾರೆ. ಇದು ಮಾನಸಿಕ ಸಂಸ್ಕಾರ ನೀಡಬಲ್ಲದು. ಸರಿ! ಆದರೆ ಭಾವನಾತ್ಮಕ ಸಂಬಂಧದಲ್ಲಿಯೇ ದಾನ ಇನ್ನಷ್ಟು ಮಹತಿ ಮೌಲ್ಯಗೊಳ್ಳುತ್ತದೆ. ಮೇರು ಸದೃಶವಾಗುತ್ತದೆ. ಸಂಖ್ಯೆಯಲ್ಲಿ ಅದು ಗೌಣ. ಕ್ರಿಯೆಯಲ್ಲಿರುವುದೇ ಅಂತಃಸತ್ವ ಪ್ರಧಾನ.

ನಮ್ಮ ಬದುಕಿನಲ್ಲಿ ಭೌತಿಕ ಹಾಗೂ ಭಾವನಾತ್ಮಕ ಸಂಬಂಧದ ಸಂಗತಿಗಳಿವೆ. ಶಾರೀರಿಕವಾದದ್ದು ಒಂದು. ಇನ್ನೊಂದು ಮಾನಸಿಕವಾದದ್ದು. ಇವುಗಳಲ್ಲೂ ಪರಸ್ಪರ ಸಂಬಂಧ. ಒಂದನ್ನು ಬಿಟ್ಟು ಇನ್ನೊಂದು ಇರುವಂತಿಲ್ಲ. ಎರಡೂ ಸಮನಾಗಿಯೇ ಬೆಳೆಯಬೇಕು. ಶರೀರದ ಸ್ವಾಸ್ಥ್ಯ ಸಂವರ್ಧನೆಯೊಂದಿಗೆ ಮಾನಸಿಕ ಸಂಸ್ಕಾರದ ಸುಧಾರಣೆಯೂ ಆಗಬೇಕು. ಶರೀರ, ಅನಾರೋಗ್ಯಕ್ಕೆ ಒಳಗಾದರೆ ಮನಸ್ಸು ಕುಗ್ಗುತ್ತದೆ. ಮನಸ್ಸು ಮುದುಡಿಕೊಂಡರೆ ಶರೀರ ತನ್ನ ಲವಲವಿಕೆ ಕಳೆದುಕೊಳ್ಳುತ್ತದೆ. ಇದರ ಪರಿಣಾಮ ನಮ್ಮ ಆತ್ಮಶಕ್ತಿಯನ್ನು ದುರ್ಬಲಗೊಳಿಸುತ್ತದೆ. ಹೀಗಾಗಿ ಭೌತಿಕ-ಭಾವನಾತ್ಮಕ ಬದುಕನ್ನು ಬೆಳೆಸುವಲ್ಲಿ ಬೆಸುಗೆ ಅತ್ಯಂತ ಅವಶ್ಯಕ.

ಸರಿಯಾದ ಆಹಾರದಿಂದ ಭೌತಿಕ ಬದುಕಿಗೆ ಬಲ ಬಂದೀತು. ಹಾಗೆ ಭಾವನಾತ್ಮಕ ಬದುಕಿಗೂ ಬೇಕಾದವುಗಳನ್ನೆ ನೀಡಿದರೆ ಮಾತ್ರ ಇದು ಸಾಧ್ಯ. ಶರೀರದ ಆಹಾರದಂತೆ ಮನಸ್ಸಿಗೂ ಸಮತೋಲನ ಸದಭಿರುಚಿಯ ಆಹಾರ ಬೇಕು. ನಮ್ಮ ಮಾನಸಿಕ ಶುಚಿತ್ವ-ಪೂಜೆ-ಧ್ಯಾನ-ಚಿಂತನ-ಪ್ರಾರ್ಥನೆಗಳೆಲ್ಲ ಭಾವನೆಗಳನ್ನು ಪೋಷಿಸತಕ್ಕ ಆಹಾರಗಳು. ಮನಃ ಸಂಸ್ಕಾರದ ಸಾಮಗ್ರಿಗಳು. ಇವನ್ನು ನಾವು ಕಾಲ-ಕಾಲಕ್ಕೆ ಒದಗಿಸುತ್ತಿರಬೇಕು. ಶರೀರಕ್ಕೆ ಹಸಿವೆಯಾದರೆ ಅದೇ ಸೂಚಿಸುತ್ತದೆ. ಆಗ ಆಹಾರ ಸ್ವೀಕರಿಸಿ ಬಲಪಡಿಸುತ್ತೇವೆ. ಹಾಗೆ ಮಾನಸಿಕ ಶರೀರಕ್ಕೂ ಹಸಿವೆ ಇದೆ. ಆಗ ನಾವು ಅದನ್ನು ಅಲಕ್ಷಿಸುವಂತಿಲ್ಲ. ಅದು ಅಂತರಂಗದ ಆಧ್ಯಾತ್ಮಿಕ ಆಹಾರ. ಅದು ಮಾನಸಿಕಕ್ಕೆ ಒಳ್ಳೆಯ ನೆಲ-ಬಲ ತರುತ್ತದೆ.

ನಮ್ಮ ದೇಶದಲ್ಲಿರುವ ದಿವ್ಯ-ಭವ್ಯ ದೇಗುಲಗಳು. ಪುಣ್ಯ ಕ್ಷೇತ್ರಗಳು. ಭಾವನಾತ್ಮಕ ಬದುಕಿಗೆ ಚೈತನ್ಯ ತರುವ ಕೇಂದ್ರಗಳಾಗಿವೆ. ಉದಾರ ದಾನಿಗಳು ದಾನದ ಸಂಕೇತಗಳಾಗಿವೆ. ಸಾಹಸಿಗಳ ಸಾಹಸದ ಸೂಚನೆಗಳಾಗಿವೆ. ನಮ್ಮ ಆಧ್ಯಾತ್ಮಿಕ ಜೀವನದ ನೆಲಗಟ್ಟು ಅವು. ಅನೇಕರ ದ್ರವ್ಯ ದಾನ-ಶಿಲ್ಪಿಗಳ ಶ್ರಮದಾನ-ಸಾಹಸಿಗರ ಶಕ್ತಿದಾನ ಇವುಗಳಿಂದ ರೂಪುಗೊಂಡವುಗಳು. ಅವರೆಲ್ಲರ ದಾನದ ಔದಾರ್ಯ ದೊರೆಯದಿದ್ದರೆ ನಮ್ಮ ದೇಶದಲ್ಲಿ ಇಷ್ಟೆಲ್ಲ ದೇವಾಲಯಗಳು ನಿರ್ಮಾಣಗೊಳ್ಳುತ್ತಿರಲಿಲ್ಲ. ನಮ್ಮ ಮನಃಶಾಂತಿಗೆ-ಮನಃ ಸಂಸ್ಕಾರಕ್ಕೆ ಚೈತನ್ಯವೂ ದೊರೆಯುತ್ತಿರಲಿಲ್ಲ. ಹಣದಿಂದ ಮನಃಶಾಂತಿ-ಸಂತೃಪ್ತಿ-ಸುಪ್ರಸನ್ನತೆ ಬರುವುದಿಲ. ತಕ್ಕ ಸೂಕ್ತ ವಾತಾವರಣ ಪರಿಸ್ಥಿತಿಗಳ ನಿರ್ಮಾಣ ಅಗತ್ಯವಿರುತ್ತದೆ. ಈ ಕಾರಣದಿಂದಲೇ ನಮ್ಮ ಹಿರಿಯರು ಅಲ್ಲಲ್ಲಿ ದೇವಾಲಯಗಳಲ್ಲಿ ನಿರ್ಮಿಸಿ ದೈವೀ ಪ್ರಭಾವ ಹೆಚ್ಚಿಸಿ ಆಧ್ಯಾತ್ಮಿಕ ವ್ಯವಸ್ಥೆಗೆ ಒಂದು ವಿಶಿಷ್ಟ ಸ್ವರೂಪ ತಂದಿರುವುದು ನಮ್ಮ ದೇಶದಲ್ಲಿ ಕಂಗೊಳಿಸುವಂತಾಗಿದೆ.

ನಮ್ಮ ತ್ಯಾಗದ ಪರಿಣಾಮವನ್ನು ಇಲ್ಲಿ ಗಮನಿಸಬೇಕು. ಜನರ ತ್ಯಾಗದಿಂದ ಈ ದೇವಾಲಯಗಳು ಬೆಳೆದರೆ ಭಕ್ತರು ನೀಡಿದ ಕಾಣಿಕೆ-ದೇಣಿಗೆಗಳಿಂದ ಜನರ ಸಂಸ್ಕೃತಿ-ಸಭ್ಯತೆ-ಸದಾಚಾರ-ಶಿಕ್ಷಣ-ಧಾರ್ಮಿಕ ವಿಕಾಸದ ಕಾರ್ಯಗಳಲ್ಲೂ ಸಹಕಾರ-ಸಹಾಯ ದೊರೆಯುತ್ತಿರುವುದನ್ನೂ ಮರೆಯುವಂತಿಲ್ಲ. ಜನರಿಂದ ದೇವಾಲಯ, ದೇವಾಲಯದಿಂದ ಜನಕ್ಕೆ ಇಂಥ ಬೆಸುಗೆ ಜೋಡಿಸುವಲ್ಲಿ ಈ ದಾನದ ಪಾತ್ರ ಸೂತ್ರ ಹಿರಿದಾದ್ದಾಗಿದೆ. ನೀಡಿ ಪಡೆಯುವುದರಲ್ಲಿ ಒಂದು ಅವ್ಯಕ್ತ ಸಂಬಂಧ ಕಾರ್ಯ ನಿರ್ವಹಿಸುತ್ತಿದೆ. ಅನಿರ್ವಚನೀಯ ಆನಂದಕ್ಕೆ ಸಹಾಯ ಮಾಡುತ್ತದೆ.

ಈ ದಾನದ ಪ್ರೇರಣೆಯನ್ನು ಉದ್ದೀಪನಗೊಳಿಸುವುದಕ್ಕಾಗಿಯೇ ಹಿಂದೆ ಯಜ್ಞ ಸಂಸ್ಥೆಯನ್ನು ಪ್ರಾರಂಭಿಸಿರುವುದು ಗಮನಾರ್ಹ. ದೈವೀಭಾವನೆಯನ್ನು ಜಾಗ್ರತಗೊಳಿಸಿ ಆಯಾ





ಕಾಲದ ಸ್ಥಿತಿ-ಗತಿ ನಿರೀಕ್ಷಿಸಿ ಆವಶ್ಯಕ ಬದಲಾವಣ ತರುವಲ್ಲಿ ಈ ಯಜ್ಞ ಸಂಸ್ಥೆ ಮಹತ್ವದ ಪಾತ್ರ ವಹಿಸುತ್ತಿತ್ತು. ದಾನಕ್ಕೆ ಇಲ್ಲಿ ಅತ್ಯಂತ ಮೌಲಿಕ ಸ್ಥಾನ. ಅದಕ್ಕಾಗಿಯೇ ಬೆಳೆದದ್ದೆಂದರೂ ತಪ್ಪಲ್ಲ. ಅಗ್ನಿಯ ಆರಾಧನೆ. ಪ್ರಕೃತಿ ಪೂಜೆ. ವಾತಾವರಣಗಳನ್ನು ಪರಿಶುದ್ಧಗೊಳಿಸುವುದು ಮನಃ ಸಂಯಮಕ್ಕೆ ಸೂಕ್ತ ಸಂಸ್ಕಾರ, ಶ್ರಮ ವರ್ಗಕ್ಕೆ ಧನಪ್ರಾಪ್ತಿ. ಇವೆಲ್ಲ ಈ ಸಂಸ್ಥೆಯ ಮೂಲ ಉದ್ದೇಶಗಳು. ಯಜ್ಞ ಪ್ರಕ್ರಿಯೆಯ ಮೂಲತತ್ವಗಳನ್ನು ಆಳವಾಗಿ ಗಮನಿಸಬೇಕು. ನೈತಿಕಶಕ್ತಿಯ ಆವಾಹನ ಹಾಗೂ ಪುನರುತ್ಥಾನದ ಕ್ರಿಯಾಶೀಲ ಯೋಜನೆ ಅದು. ದೇಶ ಕಲ್ಯಾಣದ ವಿಶಾಲ ತಳಹದಿಯ ಮೇಲೆ ಸುಸಂಪನ್ನವಾದದ್ದು. ಅದರಲ್ಲಿ ವರ್ಗವಿಭಾಗ ವಿಲ್ಲ. ಸಮಾನತೆ, ಬಂಧುತ್ವ, ಸಹಕಾರ, ಸಹಯೋಗ ಸಹೋದರತ್ವಗಳ ಪ್ರೇರಣೆಯ ಪ್ರತಿಪಾದನೆಗಳು ಅಲ್ಲಿ ಹೆಜ್ಜೆ-ಹೆಜ್ಜೆಗೂ ದೊರಕುತ್ತವೆ. ದೈವೀ ಆರಾಧನೆಯ ಮೂಲಕ ಸಮಾಜದ ರಾಷ್ಟ್ರದ ಕ್ಷೇಮ ಚಿಂತನೆಯೇ ಈ ಯಜ್ಞದ ವಿರಾಟ ಸ್ವರೂಪ. ನಾವು ಏನನ್ನೇ ಮಾಡಿದರೂ ಅದನ್ನು ದೈವೀಭಾವನೆಯಿಂದ ಮಾಡಬೇಕೆನ್ನುವುದೇ ಇದರ ಬೋಧನೆ. ಚೋದನೆ. ಯಜ ಧಾತುವಿನಿಂದ ಯಜ್ಞ ಶಬ್ದ ನಿಷ್ಪನ್ನವಾಗಿದೆ. ದೇವ ಪೂಜಾ ಸಂಗತಿಕರಣ ದಾನಗಳಲ್ಲಿ ಇದುವ್ಯಾಪ್ತವಾದದ್ದು. ಯಜ್ಞದಲ್ಲಿ ಇವೆಲ್ಲ ಸೇರಿಕೊಳ್ಳುತ್ತವೆ. ಅರ್ಹತೆಯ ಮೇಲೆ ಶ್ರಮ ವಿಭಾಗ, ಕ್ರಿಯಾತಂತ್ರಗಳು, ದಾನವೆಂಬ ಕಾರ್ಯದಲ್ಲಿ ಸಮಷ್ಟಿ ಚಿಂತನೆಯಿಂದಾಗಿ ದ್ರವ್ಯದ ವಿಕೇಂದ್ರೀಕರಣಕ್ಕೆ ಪ್ರೇರಕ-ಚಾಲಕ ವಾಗುತ್ತವೆ. ಒಂದೇ ಕಡೆಯಲ್ಲಿ ದ್ರವ್ಯದ ಸಂಗ್ರಹ ಸಾಧುವಾದುದಲ್ಲ. ಅದು ವಿತರಣೆ ಆಗುತ್ತಿರಬೇಕು. ಅವಶ್ಯಕತೆ ಇದ್ದವರಿಗೆ ದೊರೆಯಬೇಕು. ಸರೋವರದಲ್ಲಿ ನೀರು ಸಂಗ್ರಹವಾಗುತ್ತಲೇ ಇದ್ದರೆ ಅದರ ರಕ್ಷಣೆಯ ದಂಡೆಗಳು ಒಡೆಯುವ ಭೀತಿ ಇರುತ್ತದೆ. ಅದು ಕೋಡಿಗಳಲ್ಲಿ ಹರಿದು ಹೊಲಗದ್ದೆಗಳಿಗೆ ತಲುಪಿ ಹಸಿರು ತರುವಂತಾದರೆ ಅದರ ನಿರ್ಮಾಣದ ಉದ್ದೇಶ ಸಾರ್ಥಕ. ಸಂಪತ್ತೂ ಹಾಗೇ ಸಂಗ್ರಹ ಹೆಚ್ಚಾದಂತೆ ಸತ್ಕಾರ್ಯಗಳಿಗೆ ವಿತರಣೆಯಾಗಬೇಕು. ಸಾಮಾಜಿಕ ಅಸಮತೋಲನ ನೀಗಿಸಲು ಸಹಾಯವಾಗಲೆಂದೇ ಈ ದಾನ-ತ್ಯಾಗ, ಸಹಾಯದ ಸಂಸ್ಕೃತಿ ಬೆಳೆದು ಬಂದಿದೆ. ಮೋಡಗಳಲ್ಲಿ ನೀರು ತುಂಬಿದಾಗ ಭೂಮಿಗೆ ಬೀಳಬೇಕು. ಮತ್ತೆ ಆವಿಯಾಗಿ ಮೋಡದ ಬಲಹೆಚ್ಚಿಸ ಬೇಕು. ಸಂಕುಚಿತ ಸ್ವಾರ್ಥಭಾವನೆ ದೂರೀಕರಿಸಿ ಉದಾತ್ತೀಕರಣ ದಲ್ಲಿಯೇ ಜೀವನದ ಮೌಲ್ಯ ಬೃಹತ್ತಾಗಿ ಬೆಳೆಯುತ್ತದೆ. ಬಹುಶಃ ಮಾನವ ಕುಲಕ್ಕೆ ನೀಡಿದ ಬ್ರಹ್ಮದೇವರ ಅಂತರಂಗದ ಅಭೀಪ್ಸೆಯೂ ಇದೇ ಇದ್ದಿರಬೇಕು.

ದಾನ ಹಾಗೂ ತ್ಯಾಗ ಒಂದೇ ನಾಣ್ಯದ ಎರಡು ಮಗ್ಗಲು ಇದ್ದ ಹಾಗೆ! ಒಂದು ಕೊಡುವುದು. ಇನ್ನೊಂದು ಬಿಡುವು. ಇಲ್ಲಿ ಪಡೆಯುವುದೂ ಇರುತ್ತದೆ. ಇದೇ ನಮಗೆ ಧನ ಋಣ ಸಂಬಂಧ. ಈ ಋಣಸಂಬಂಧ ನೀಗಿಸುವದಕ್ಕಾಗಿಯೇ ತ್ಯಾಗಮಾಡುವುದು ಅವಶ್ಯಕ. ಅದಕ್ಕಾಗಿಯೇ 'ತ್ಯಾಗೇ ನೈಕೇ ಅಮೃತತ್ವಮಾನವಃ' ಅಂದದ್ದು. ✪

**'ಸಿದ್ಧಗಂಗಾ' ಮಾಸಪತ್ರಿಕೆ ಚಂದಾದಾರರಲ್ಲಿ ಮನವಿ**

೨೦೧೪ರ ನಿಮ್ಮ ವಾರ್ಷಿಕ ಚಂದಾ ಅವಧಿ ಮುಗಿದಿರುವ ಸದಸ್ಯರುಗಳು ೨೦೧೫ನೇ ಸಾಲಿಗೆ ನವೀಕರಿಸಿಕೊಳ್ಳಬೇಕಾಗಿ ವಿನಂತಿ.

ನಿಮ್ಮ ವಿಳಾಸ ಬದಲಾವಣೆ ಆದ ಕೂಡಲೆ ಹೊಸ ವಿಳಾಸವನ್ನು ಚಂದಾ ನಂಬರ್ ತಪ್ಪದೇ ಸೂಚಿಸಿ ಈ ಕೆಳಕಂಡ ವಿಳಾಸಕ್ಕೆ ಪತ್ರ ಮೂಲಕ ತಿಳಿಸಬೇಕಾಗಿ ನಮ್ರ ವಿನಂತಿ.

ವಾರ್ಷಿಕ ಚಂದ ರೂ. ೨೦೦/- ಆಜೀವ ಚಂದಾ ರೂ. ೧೫೦೦/- 'ಸಿದ್ಧಗಂಗಾ' [illegible] ನಿರಂತರವಾಗಿ ಬೆಳಗಲು ಆಜೀವ ಸದಸ್ಯತ್ವ ಪಡೆಯಿರಿ. ಚಂದಾ ಹಣವನ್ನು ಈ ವಿಳಾಸಕ್ಕೆ ಕಳುಹಿಸಿರಿ.

ಪ್ರಕಾಶಕರು, 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.

ನಾನೂ ಮಾಡಬಲ್ಲೆ ಎಂಬ ಅಹಂಕಾರದಿಂದಲೋ ಜನರನ್ನು ಮೆಚ್ಚಿಸಲೋ ಮಾಡಿದ ಕ್ರಿಯೆ ಸರ್ವೋತ್ಕೃಷ್ಟವಾಗಲಾರದು. ನನ್ನ ಇರವನ್ನೇ ಮರೆತು ತಾದಾತ್ಮತೆಯಿಂದ ಮಾಡಿದ ಕೆಲಸ ಪವಾಡವಾಗುತ್ತದೆ; ಅದ್ಭುತವಾಗುತ್ತದೆ.
-ಡಾ॥ ಗುರುರಾಜ ಕರ್ಜಗಿ

## ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿ

### ಶ್ರೀ ಸಿದ್ಧಗಂಗಾಮಠ, ತುಮಕೂರು–೫೭೨ ೧೦೪.

**ಆತ್ಮೀಯರೇ,**

ಶ್ರೀ ಸಿದ್ಧಗಂಗಾಮಠದ ದಾಸೋಹ ಸೇವೆಯ ವಿಶಿಷ್ಟ ಯೋಜನೆಯಾಗಿ ರೂಪುಗೊಂಡದ್ದು 'ಗ್ರಾಮಾಂತರ ಬಸವ ಜಯಂತಿ ಯೋಜನೆ' ಎಂಬುದನ್ನು ನೀವು ಮನಗಂಡವರಾಗಿದ್ದೀರಿ. ಯೋಜನೆಯ ಯಶಸ್ಸಿಗೆ ಸಹಕರಿಸುತ್ತ ಬಂದವರಾಗಿದ್ದೀರಿ. ೧೯೬೪ರಂದು ಪ್ರಾರಂಭವಾದ ಈ ಯೋಜನೆ ೧೯೭೪ರಿಂದ ಗ್ರಾಮೀಣ ಬಂಧು–ಭಗಿನಿಯರಿಗೆ ಬಸವಣ್ಣನವರ ತತ್ವಾದರ್ಶಗಳನ್ನು ಜಗಜ್ಯೋತಿ ಬಸವೇಶ್ವರ ನಾಟಕ ಪ್ರದರ್ಶನದ ಮೂಲಕ ಪರಿಚಯಿಸುತ್ತ ಬಂದಿರುವುದು ನಿಮಗೆ ತಿಳಿದಿರುವುದೇ ಆಗಿದೆ. ಪರಮಪೂಜ್ಯ ಶ್ರೀ ಶ್ರೀಗಳವರ ಸಂಕಲ್ಪಕ್ಕೆ ಸಾಕಾರಗೊಳ್ಳುತ್ತ ನಡೆದಿರುವುದಾಗಿದೆ. ನೂರು ಉಪನ್ಯಾಸಗಳಿಗಿಂತ ಒಂದು ನಾಟಕದ ಪ್ರದರ್ಶನ ಪರಿಣಾಮದಾಯಕವಾದುದೆಂಬುದನ್ನು ತಿಳಿದು ಪರಮಪೂಜ್ಯ ಶ್ರೀ ಶ್ರೀಗಳು ಈ ಯೋಜನೆಗೆ ವಿಶೇಷ ಮಹತ್ವವನ್ನು ನೀಡಿದರು. ಇದರಿಂದಾಗಿ ಶ್ರೀಮಠ ಜನಸಾಮಾನ್ಯರ ಬಳಿಗೇ ಹೋದಂತಾದುದದಲ್ಲದೆ, ಗ್ರಾಮೀಣರ ಸಮಸ್ಯೆಗಳಿಗೂ ದಾರಿ ತೋರುವಂತಾಯಿತು. ಇದೆಲ್ಲಾ ನಿಮ್ಮ ಸಹಕಾರದಿಂದಾಯಿತು. ನಿಮ್ಮ ಸೇವೆ ಸ್ಮರಣೀಯ.

ಇದೀಗ ಈ ಯೋಜನೆ ಪ್ರಾರಂಭವಾಗಿ ಐವತ್ತು ವರ್ಷಗಳು ತುಂಬುತ್ತಿದ್ದು ಒಂದು ಸಾವಿರ ನಾಟಕಗಳನ್ನು ಪ್ರದರ್ಶಿಸುವಂತಾದುದು ಹೆಮ್ಮೆ ಪಡುವಂತಾದುದಾಗಿದೆ. ನೀವು ನಾಟಕದಲ್ಲಿ ಪಾತ್ರ ವಹಿಸುವುದರ ಮೂಲಕ/ರಂಗಸಜ್ಜಿಕೆ ನಿರ್ಮಿಸುವುದರ ಮೂಲಕ/ ವಾದ್ಯಗೋಷ್ಠಿಗಳಲ್ಲಿ ಪಾಲ್ಗೊಳ್ಳುವುದರ ಮೂಲಕ/ ವರ್ಣಾಲಂಕಾರ, ವಸ್ತ್ರಾಲಂಕಾರ ಮಾಡುವುದರ ಮೂಲಕ ಸಹಕರಿಸಿರುತ್ತೀರಿ. ಶ್ರೀಗಳವರ ಸಂಕಲ್ಪಕ್ಕೆ ಸಾಕಾರವಾಗಿರುತ್ತೀರಿ. ಪರಮಪೂಜ್ಯ ಶ್ರೀ ಶ್ರೀಗಳವರ ಅಪ್ಪಣೆಯ ಮೇರೆಗೆ ಮುಂದಿನ ವರ್ಷ ಯೋಜನೆಯ ಸಂಬಂಧವಾಗಿ ಸ್ಮರಣಸಂಚಿಕೆಯನ್ನು ಹೊರತರುವುದರ ಮೂಲಕ ಸಮಾರಂಭವನ್ನು ಆಯೋಜಿಸ ಬೇಕಾಗಿರುತ್ತದೆ. ಆದುದರಿಂದ ನೀವು ಈ ಪತ್ರ ತಲುಪಿದ ಒಂದು ತಿಂಗಳಿನೊಳಗಾಗಿ ದಿನಾಂಕ ೭–೧೨–೨೦೧೪ಕ್ಕೆ ಮೀರದಂತೆ ನಾಟಕದಲ್ಲಿ ನೀವು ವಹಿಸುತ್ತಿದ್ದ ಪಾತ್ರ, ವರ್ಷ, ನಿಮ್ಮ ಅನುಭವಗಳನ್ನು ಕುರಿತು ಎರಡು ಪುಟಗಳಿಗೆ ಮೀರದಂತೆ, ನಿಮ್ಮ ಪೂರ್ಣ ವಿಳಾಸ ಹಾಗೂ ಚರವಾಣಿ ಸಂಖ್ಯೆಯೊಂದಿಗೆ 'ವ್ಯವಸ್ಥಾಪಕರು, ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿ, ಶ್ರೀ ಸಿದ್ಧಗಂಗಾ ಮಠ, ತುಮಕೂರು–೫೭೨ ೧೦೪' ಈ ವಿಳಾಸಕ್ಕೆ ಕಳುಹಿಸಿಕೊಡಬೇಕಾಗಿ ವಿನಂತಿಸುತ್ತೇವೆ. ತಮ್ಮ ಪಾಸ್‌ಪೋರ್ಟ್ ಸೈಜಿನ ಭಾವಚಿತ್ರ ಮತ್ತು ಮೊಬೈಲ್ ಸಂಖ್ಯೆಯನ್ನು ಕಳುಹಿಸಿಕೊಡಲು ವಿನಂತಿ.

ತಮ್ಮ ವಿಶ್ವಾಸಿಗಳು
ಪಿ.ಎನ್. ಚಂದ್ರಶೇಖರಯ್ಯ
ಹೆಚ್.ವಿ. ವೀರಭದ್ರಯ್ಯ

ವ್ಯಕ್ತಿತ್ವ ಎಂದರೆ ಒಬ್ಬ ವ್ಯಕ್ತಿಯ ಹೊರರೂಪ ಅಷ್ಟೇ ಅಲ್ಲ. ಅವರ ಕಾರ್ಯಶೀಲತೆ, ನಡೆನುಡಿ, ಪರಿಸರದ ಪ್ರಚೋದನೆಗಳಿಗೆ ಅವರು ಸ್ಪಂದಿಸಿದ ರೀತಿ. ಅವರ ಉದ್ದೇಶಗಳು, ಆ ಉದ್ದೇಶ ಸಾಧನೆಗಾಗಿ ಅನುಸರಿಸುವ ಮಾರ್ಗ, ವಿಧಾನಗಳು, ಜೀವನ ಶೈಲಿ, ಇತರರ ಬಗ್ಗೆ ಅವರ ಧೋರಣೆ, ಮನಸ್ಥಿತಿ, ಅವರ ನಿಲುವು, ಆಚರಣೆಗಳು, ಕಷ್ಟ-ನಷ್ಟ-ಸೋಲು-ನಿರಾಸೆಗಳಿಗೆ ಒಳಗಾದಾಗ ಪ್ರತಿಕ್ರಿಯಿಸುವ ರೀತಿ, ಸ್ವೀಕಾರ ಮನೋಭಾವ, ಇವೆಲ್ಲವೂ ಒಟ್ಟಾರೆಯಾಗಿ 'ವ್ಯಕ್ತಿತ್ವ' ಎನಿಸಿಕೊಳ್ಳುತ್ತದೆ. ಹೀಗಾಗಿ ಒಬ್ಬ ವ್ಯಕ್ತಿ ಮತ್ತು ಅವರ ವ್ಯಕ್ತಿತ್ವವನ್ನು ಬೇರೆ ಬೇರೆಯಾಗಿ ನೋಡಲು ಸಾಧ್ಯವಿಲ್ಲ.

-ಡಾ. ಕೆ.ವಿ. ಸಂತೋಷ್ ಹೊಳಲ್ಕೆರೆ.





## ಬಳಲಿಕೆಯಾದರೇನು ?-ಅಳೆಯುವುದನು ಬಿಡಲಾಗದು

-ಸ.ರಾ. ಸುಳಕೂಡೆ *

ಸಮಾಧಾನ ಪಡೆಯಲು ಹರವಿಕೊಂಡಿರುವ ಒಲವು, ನಿಲುವುದು, ನೀತಿ–ರೀತಿ, ವಿದ್ಯೆ–ವಿಜ್ಞಾನ ಪ್ರಯೋಜನೆಗೆ ಬಂದಿರುವ ಸನ್ನಿವೇಶವನ್ನು ನಿಖರಗೊಳಿಸದ ವಾದ–ವಿವಾದಗಳು ನಿರಂತರವಾಗಿ ಮುಂದುವರಿದಿವೆ. ದಿನಕ್ಕೊಂದು ಲೆಕ್ಕ, ಲೆಕ್ಕಾಚಾರ ಹದಗೊಳಿಸುವ ಸಾಹಸಯ ಸತ್ಯ–ಮಿಥ್ಯವನ್ನೆಲ್ಲ ವಿಂಗಡಿಸುವತ್ತ ದಾಪುಗಾಲು ಹಾಕುತ್ತಲಿದ್ದೇವೆ. ಲೆಕ್ಕದ ತೆಕ್ಕೆಗೆ ಬಿದ್ದಿರುವ ನಮ್ಮ ಮನೋಗತದೊಳಗೆ ಸುಖ, ಲಾಭ, ಇನ್ನಷ್ಟು–ಇನ್ನಷ್ಟು ಹೆಚ್ಚಿಸಿಕೊಳ್ಳುತ್ತ ಬಚ್ಚಿಟ್ಟುಕೊಳ್ಳುವುದೇ ಸದಾ ಎಚ್ಚರಿಕೆಯಿಂದ ಇರುವ ಸನ್ನಿವೇಶವಿದೆ. ಎಲ್ಲರೂ ತಮ್ಮ ತಮ್ಮ ಗತ್ತಿನ ಲೆಕ್ಕದೊಳಗೆ ಇದ್ದಾರೆ. ಕೆಲವರ ಲೆಕ್ಕ ಪಕ್ಕಾ–ಕಚ್ಚಾ ಇದ್ದರೆ ಇನ್ನು ಕೆಲವರ ಲೆಕ್ಕವೇ ಹತ್ತುವುದಿಲ್ಲ. ದೊಡ್ಡ–ದೊಡ್ಡ ಪೋಷಾಕದೊಳಗಿರುವವರ ಲೆಕ್ಕ ಯಾವತ್ತೂ ಹತ್ತಕ್ಕೆ, ಹನ್ನೊಂದು ಗೊಂದಲವನ್ನು ಸುತ್ತುವುದೇ ಆಗಿರುತ್ತದೆ. ಲೆಕ್ಕದಂತೆ ಹಲವೂ ಶುದ್ಧ, ಅಂತಿಮಗೊಂಡರೇ ಸುಸೂತ್ರಕ್ಕಾಗಿ ಗುಲ್ಲೆಬ್ಬಿಸುವ ಆಶ್ವಾಸನೆಗಳು, ಭರವಸೆಗಳು ಮತ್ತು ಆಶೆ ಸೃಷ್ಟಿಸುವ ಹುನ್ನಾರಗಳ ತಪಶೀಲವೇ ಇರುತ್ತಿರಲಿಲ್ಲ. ಯಾರಿಗೂ ಗೊತ್ತಾಗದಂತೆ ಅಳೆದುಕೊಳ್ಳುವುದು, ಗೊತ್ತು ಗುರಿವಿಲ್ಲದೆ ದಿಢೀರನೆ ಒಳದಾರಿ ತುಳಿದು ಮೆರೆಯುವುದು ಲೆಕ್ಕಕ್ಕೆ ಹತ್ತಿದ್ದರೆ ದಿಕ್ಕೇಡಿತನಕ್ಕೆ ಆಸ್ಪದವೇ ಇರುತ್ತಿರಲಿಲ್ಲ. ಮಾನವನು ಬದುಕುವುದಕ್ಕಾಗಿ ಅಳತೆ, ಅಳತೆಗೋಲ, ಮಾನದಂಡಗಳನ್ನು ಬದುಕಿನ ಭಾಗವನ್ನಾಗಿಸಿದ್ದಾನೆ. ಆದರೆ ಎಲ್ಲವನ್ನು ಅಳತೆಗೆ ಅಳವಡಿಸಿಕೊಂಡು ಬದುಕುವುದು ಅತ್ಯಂತ ಸಂಕುಚಿತ ಬದುಕಿನ ಸಂಕೇತವೇ ಆಗಿದೆ. ಮನುಷ್ಯನ ಬದುಕಿನೊಳಗೆ ಯಾವುದು ಅಲೆಯಾಗಬಾರದೆಂಬುದು ಸರ್ವಸಮ್ಮತ ಅಭಿಪ್ರಾಯವೇ ಆಗಿದೆ. ಮನುಷ್ಯ ನಿತ್ಯ ಹಲವು ಲೆಕ್ಕ ಹಾಕುತ್ತಲೇ ಇರಲು ಅನೇಕ ಕಾರಣಗಳಿವೆ. ಬದುಕುವುದರಲ್ಲಿ ಲೆಕ್ಕ ಬಿಟ್ಟು ಇರಲಾಗದು. ಏಣಿಕೆ, ಹವಣಿಕೆಗಳು ಅನೇಕ ಜ್ಞಾನ–ವಿಜ್ಞಾನ–ಸಂಶೋಧನೆ, ವಿಕಾಸ ಪ್ರಗತಿಗೆ ಪೂರಕವಾಗಿವೆ. ಆದರೆ ಸೋಮಾರಿಗಳಿಗೆ ಎಲ್ಲದರಲ್ಲೂ ಆಸರಿಕೆ–ಬೇಸರಿಕೆ, ತೊಳಲಾಟ, ಬಳಲಿಕೆ. ಈ ಬಳಲಿಕೆಯು ಸೂರ್ಯ ಬಂದರೂ–ಹೋದರೂ ಇರುವುದು ವಿಚಿತ್ರವಲ್ಲ. ಸಹಜತೆಯನ್ನು ಕಳೆದುಕೊಳ್ಳುವುದು ಸೋಮಾರಿತನವನ್ನು ಬೆಳೆಸಿಕೊಳ್ಳುವುದು. ಹಗಲು ಕನಸು ಕಾಣುವುದು, ಅಲ್ಲದ ಅಳತೆಯ ಹಾವಳಿಗೆ ಒಳ ಗಾಗುವುದು ಮನುಷ್ಯ ಸ್ವಭಾವದ ವೈಚಿತ್ರ್ಯವೇ ಆಗಿದೆ. ಜಗತ್ತಿನ ಜನರು ನಿತ್ಯದೊಳಗೆ ಕೈಗೆಟಕುವ ಬಯಕೆ– ಭರವಸೆಗಳಲ್ಲಿ ಅಭಿರುಚಿ ಹೊಂದಿಲ್ಲ. ತಮ್ಮ ನೆಲೆಯೊಳಗೆ ಅನನ್ಯತೆಯನ್ನು ಸಾಧಿಸಲಾರದವರು ಹೊರ ದೇಶ ಪರದೇಶಗಳಲ್ಲಿ ಬದುಕನ್ನು ತೂಗಿಸಿಕೊಳ್ಳಲು ಹರಿದಾಡುತ್ತಿದ್ದಾರೆ. ಇನ್ನು ಕೆಲವರು ತಮ್ಮ ಬದುಕಿನ ರಕ್ಷಣೆ, ಸಂರಕ್ಷಣೆಗೆ ಚಿಂತಿಸದೇ ಮರಿಮಕ್ಕಳಿಗೆ ಅಮೂಲ್ಯವಾದ ಕೊಡುಗೆ ನೀಡುವ ಲೆಕ್ಕದೊಳಗೆ ಮೂರು ಹೊತ್ತು ಚಿಂತಿಸುತ್ತಿದ್ದಾರೆ. ಎಲ್ಲರದೊಂದು ಲೆಕ್ಕ ಆದರೆ ಊರು ಉಡಾಳನದೊಂದು ಬೇರೆ ಲೆಕ್ಕವೇ ಇರುತ್ತದೆ. ಧಾರ್ಮಿಕ ನೆಲೆಯೊಳಗೆ ಮೂರು ಲೋಕದ ಚಿಂತೆಯ ಲೆಕ್ಕವನ್ನೇ ಚುಕ್ತಾ ಮಾಡುವ ಪ್ರತಿಪಾದನೆ ಇದೆ. ಹೀಗಾಗಿ ಇಲ್ಲದಿದ್ದರೂ ಒಂದಿಲ್ಲೊಂದು ಲೆಕ್ಕದ ಗಂಟು ತೆರೆಯೊಳಗೆ ತುಂಬಿಕೊಂಡಿರುವುದಂತೂ ಸತ್ಯವೇ ಆಗಿದೆ.

ಮಾನವನು ಎಲ್ಲದರೊಳಗೆ ಜಿಪುಣನಾದರೂ ದಯೆ, ಅಂತಕರಣ, ಪರೋಪಕಾರ, ಪರಹಿತದೊಳಗೆ ಸ್ವಲಾಭದ ಲೆಕ್ಕ ಹಾಕಬಾರದು ಮತ್ತು ಲೆಕ್ಕಕ್ಕೂ ಒಳಗಾಗಬಾರದು. ಇಂದಿನ ಜಾಹೀರಾತಿನ ಯುಗದೊಳಗೆ ಒಂದು ಹಾಕಿ ಕೋಟಿ ತೆಗೆಯುವ ಜಾಣ್ಮೆಯು ಭರಾಟೆಯೊಳಗಿದೆ. ಜನಾಂಗವು ಕೋಟಿ ಕೋಟಿ ಅಳೆಯುತ್ತ ಹೋಗಿದೆ ಮುಟ್ಟಿದರೆ ಬಂಗಾರವಾಗುವ ವರ ಪಡೆದು ಉಣ್ಣಲು ಸಹ ಆಗದ ಸ್ಥಿತಿಯೊಳಗೆ ಸಣ್ಣಾಗಿದೆ. ಹೀಗಿದ್ದೂ ಅಳೆಯುವ ಮರ್ಮ ತಿಳಿಯದೆ ಅದೆಷ್ಟೋ ಸಲ ಮೋಸ

* ನಂ., ೧೩೧೯, ಶ್ರೀ ಶಿವಪ್ರಸಾದ, ಶ್ರೀ ಬಸವೇಶ್ವರ ಬಡಾವಣೆ, ರಾಮತೀರ್ಥನಗರ, ಬೆಳಗಾಂ–೧೬.

ಅಧಿಕಾರ ಮತ್ತು ಐಶ್ವರ್ಯಗಳು ಮಾನವೀಯ ಸಂಬಂಧಗಳನ್ನು ಹಾಳು ಮೂಡುತ್ತದೆ. -ಸಾಹಿತ್ಯನಂದನ

ಹೋಗಿದೆ, ಜಗತ್ತನ್ನೇ ಮೋಸ ಜಾಲಕ್ಕೆ ಸಿಲುಕಿಸಿದೆ.

ಸಾಮಾನ್ಯ ಜನರು ಬದುಕಿನೊಳಗೆ ತೋಡಿಕೊಂಡಿದ್ದು ಮತ್ತು ಅಳೆದುಕೊಂಡಿದ್ದು ಅಷ್ಟಕ್ಕಷ್ಟೇ. ಈ ಜನರಿಗೆ ಕಷ್ಟಗಳೇ ಹೆಚ್ಚಾಗಿರುವುದರಿಂದ ಅಳೆಯುವಲ್ಲಿ ಬೇಸರ, ಬಳಲಿಕೆಗಳು ತೀವ್ರವಾಗಿರದಿದ್ದರೂ, ಪರರ ಭೋಗ ಭಾಗ್ಯಕ್ಕಾಗಿ ಅಳೆಯುವ ಕಾರ್ಯ ಕೈಗೊಂಡಿದ್ದು ಸರ್ವಶೃತವೇ ಆಗಿದೆ.

ಸೂರ್ಯ ಒಂದು ಅಳತೆಯೊಳಗೆ ಉಳಿದುಕೊಂಡು ಬಲ್ಲ-ಬಲ್ಲವರಿಗೂ, ಬಲಹೀನರಿಗೂ, ಪುಣ್ಯ-ಪಾಪಿಗಳಿಗೂ ಸಮನಾಗಿ ನಿಂತಿದ್ದಾನೆ. ಆದರೆ ಸೂರ್ಯನನ್ನು ಸಹ ತಮ್ಮ ಅನುಕೂಲಕ್ಕೆ ಅಳತೆಗೆಟ್ಟು ಬಳಸಿಕೊಳ್ಳುವ ಉದ್ಯಮಿಗಳು ಹೇರಳವಾಗಿಯೇ ಇದ್ದಾರೆ. ಇಷ್ಟೊಂದು ಚಾಕಚಕ್ಯತೆಯ ಗಳಿಸಿಕೊಂಡವರಿಗೂ ದಿನಗಳು ಹೀಗೆ ಅಳತೆಯೊಳಗೆ ಇರುತ್ತವೆಂದು ಹೇಳಲಾಗದು. ಪ್ರತಿದಿನದ ವಿದ್ಯಮಾನದ ಅಳತೆ, ಘಟನೆ, ಗೋಪ್ಯವಾಗಿಯೇ ಇದೆ. ನಿಸರ್ಗ ತನ್ನ ನಿಗೂಢತೆ, ರಹಸ್ಯ ಉಳಿಸಿಕೊಂಡಿದ್ದೇ ದೊಡ್ಡ ಲೆಕ್ಕವಾಗಿದೆ.

ಒಬ್ಬ ವ್ಯಾಪಾರಿ, ವ್ಯಾಪಾರವನ್ನು ಒಂದು ಲೆಕ್ಕದೊಳಗೆ ನಿಭಾಯಿಸುವಂತೆ ಅಗತ್ಯವಿದೆ. ಇದು ಜಗತ್ತಿನ ವ್ಯವಸ್ಥೆಗೆ ಪೂರಕವೂ ಆಗಿದೆ. ಆದರೆ ವ್ಯಾಪಾರ, ಲೆಕ್ಕ, ಲೆಕ್ಕ ಎನ್ನುತ್ತ ಬದುಕಿನ ಇತರ ಅವಕಾಶಗಳಲ್ಲೂ ಲೆಕ್ಕ ಹಾಕುತ್ತ, ಅವಸಾನ, ಅವಿವೇಕತನಕ್ಕೆ ಗುರಿಯಾಗಬಾರದು. ಜಗದ ಜನರು ಒಬ್ಬರಿಗೊಬ್ಬರು ತುಲನೆ ಮಾಡಿಕೊಂಡು ತಿಕ್ಕಾಟಕ್ಕೆ ಗುರಿಯಾಗಿ ಬದುಕಿನ ಲೆಕ್ಕವನ್ನು ಕಿಡಿಸುತ್ತಿದ್ದಾರಲ್ಲದೆ ಅನೇಕ ಬಿಕ್ಕಟ್ಟು, ಇಕ್ಕಟ್ಟುಗಳಿಗೆ ಶಕ್ತಿ ತುಂಬುತ್ತಲೇ ಇದ್ದಾರೆ. ಲೆಕ್ಕ ಎಂಬುದು ಅಷ್ಟೊಂದು ಘಾತಕ, ವಿಪರೀತ ತನಕ್ಕೆ ಮನುಕುಲವನ್ನು ಗುರಿ ಮಾಡಿದೇ ಆದರೆ ತಮ್ಮ ಧರ್ಮ, ತಮ್ಮ ಭಾಷೆ, ತಮ್ಮ ಅಧಿಕಾರವೇ ಇರಬೇಕೆಂದು, ತಮ್ಮ ಅನುಯಾಯಿಗಳು, ಧರ್ಮೀಯರ ಸಂಖ್ಯೆ ಬಹುಮತದೊಳಗೆ ಗೆದ್ದು ಬರಬೇಕೆಂದು ಜಗ್ಗಾಟ ಜೋರಾಗಿ ಯುದ್ಧಗಳು, ಕಲಹ-ಕಾಳಗಗಳು ಮತ್ತು ಗುಪ್ತ ಹಿಂಸಾಚಾರಗಳು ಕಾರ್ಯಗತಗೊಳ್ಳುತ್ತಲಿವೆ. ಭೂಗತ, ಭಯಾನಕ ಸನ್ನಿವೇಶಗಳಲ್ಲಿ ಈ ಲೆಕ್ಕಗಳಿಗೆ ಬಳಲಿಕೆಯೇ ಇಲ್ಲ. ಗುಂಪು, ಗುಂಪುಗಳಲ್ಲಿ ಮನುಕುಲವನ್ನು ವಿಭಾಜಿಸಿ ಲೆಕ್ಕ ಹಾಕುವ ಪರಿಯು ಅತ್ಯಂತ ಭೀಕರ ಸನ್ನಿವೇಶವನ್ನು ನಿರ್ಮಿಸಿದೆ. ಜನಾಂಗೀಯ ದ್ವೇಷಕ್ಕೆ ಕುಲ ಜಾತಿಯ ಜನಸಂಖ್ಯೆ ಲೆಕ್ಕ ಆಧಾರವಾಗುತ್ತಿರುವುದನ್ನು ಅಲ್ಲಗಳೆಯ ಲಾಗದು. ಧಾರ್ಮಿಕ ನೆಲೆಯೊಳಗೆ ಸಾಮರಸ್ಯಕ್ಕೆ ನೆಲೆಯಾಗದಂತೆ ವ್ಯವಹರಿಸುವ ಮನಸ್ಸುಗಳು ನಮ್ಮಲ್ಲಿ ನಿತ್ಯ ಲೆಕ್ಕದೊಳಗೆ ಪೈಪೋಟಿಯೊಳಗಿವೆ. ವಿನೋಭಾರವರು ಉಲ್ಲೇಖಿಸಿರುವ ಒಂದು ಪ್ರಸಂಗ ಇಲ್ಲಿ ಪ್ರಸ್ತುತ 'ಒಬ್ಬ ದೊಡ್ಡ ಮನುಷ್ಯ ನನಗೊಂದು ಪತ್ರ ಬರೆದ. ೧೩ ಕೋಟಿ ರಾಮನಾಮ ಜಪ ಮಾಡಬೇಕು, ನೀನೂ ಅದರಲ್ಲಿ ಭಾಗವಹಿಸು. ದಿನವೂ ಎಷ್ಟು ಜಪ ಮಾಡುತ್ತೀ ತಿಳಿಸು' ಎಂತ. ಆ ಮನುಷ್ಯ ತನ್ನ ಬುದ್ಧಿಗೆ ತಕ್ಕಂತೆ ಪ್ರಯತ್ನ ಮಾಡಿದ. ಅದನ್ನು ನಾನು ದೋಷವೆನ್ನಲಾರೆ. ಆದರೆ ರಾಮನಾಮ ಹೀಗೆ ಅಳೆಯುವ ವಸ್ತುವಲ್ಲ. ಹಾಗೆಯೇ ನಮ್ಮ ಧರ್ಮದವರು, ಆ ಧರ್ಮದವರು, ಈ ನಂಬಿಗೆಯವರು ಎಂದು ಲೆಕ್ಕ ಹಾಕಿ ಹೀಯಾಳಿಕೆ, ಹತ್ತಿಕ್ಕುವಿಕೆ ಸಮಂಜಸವಲ್ಲ. ಯಥಾರ್ಥತೆಯು ಬೆಳಗಿಕೊಂಡಷ್ಟು ಜಪ-ತಪ-ನೆಪಗಳು ಹೇಳಹೆಸರಿಲ್ಲದಂತೆ ನಿರಸನಗೊಂಡು ಲೆಕ್ಕದ ಸಂತೆಯು ಸತ್ಯಕ್ಕೆ ಹುರಿಗೊಳ್ಳುತ್ತದೆ. ಜಗದ ಜೀವನದೊಳಗೆ ಮತ್ತೊಬ್ಬರ ಲೆಕ್ಕವನ್ನು ಸರಿದೂಗಿಸುವ ಧರ್ಮ ಸಂಕಟಗಳು, ವಿಪರೀತವಾಗಿ ಬೆಳೆದು ನಿಂತಿವೆ. ಈ ಲೆಕ್ಕದೊಳಗೆ ಯೋಜನೆ, ಪ್ರಯೋಜನೆಗಳು ಸೇರಿಕೊಂಡ ನಿತ್ಯ ಜನಸಾಮಾನ್ಯರು ಆಶೆಗಳ ತೂಗುಯ್ಯಾಲೆಯೊಳಗೆ ಅತ್ತಿಂದ ಇತ್ತ ಹರಿದಾಡುತ್ತ ಅಲ್ಲಿಯೂ ಸೈ, ಇಲ್ಲಿಯೂ ಜೈ ಎನ್ನುವ ಸ್ಥಿತಿಯೊಳಗಿದ್ದಾರೆ. ಮನುಜನೊಳಗೆ ದೃಢತೆಯು ಬದ್ಧತೆಗೆ ಒಳಗಾಗದಿದ್ದಲ್ಲಿ ಯಾವುದು ಲೆಕ್ಕ ಸರಿ ಹೊಂದದು.

ಮಾನವನ ಬದುಕಿಗೆ ಅಂತಃಸತ್ವವನ್ನು ತುಂಬುವ ಅಗತ್ಯ ಇಂದಿನದಾಗಿದೆ. ಭೌತಿಕತೆಯ ಸೊಗಸು-ಸೌಂದರ್ಯ ಪ್ರಚಾರಗೊಳಗೆ ಮನುಷ್ಯ ಬದುಕಿನ ಲೆಕ್ಕಗಳು ತಪ್ಪುತ್ತಲಿವೆ. ಹೊಸತು, ಹೊಸತು, ನೂತನ, ಅತ್ಯಾಧುನಿಕ,

> **• ಪರಿಸರ ಮತ್ತು ಮಕ್ಕಳು ನನ್ನ ದೃಷ್ಟಿಯಲ್ಲಿ ಎರಡೂ ಒಂದೇನೆ. ಪರಿಸರವನ್ನು ನಾವು ಕೆಡಿಸಬಾರದು. ಮಕ್ಕಳ ಮನಸ್ಸನ್ನು ಕೆಡಿಸಬಾರದು. -ನಾ. ಡಿಸೋಜ.**





ವೇಗ, ವೈವಿಧ್ಯ ಎಂದು ನಾವಿಂದು ಬೇಕು ಬೇಡುಗಳಲ್ಲಿ ನಿರ್ಣಯಿಸಿಕೊಳ್ಳಲಾರದ ಸ್ಥಿತಿಗೆ ತಲುಪಿದ್ದೇವೆ. ನಮ್ಮ ನಡುವೆ ಬಿರುಕುಗಳನ್ನು ಅಗಲೀಕರಿಸುವ ಚಂಚಲತೆಗಳು ರಂಜನೆ ಮನರಂಜನೆ-ಮೋಜುಗಳು ಅರಿವಿಲ್ಲದ ಅನುಸರಣೆಯೊಳಗೆ, ಸದ್ದಿಲ್ಲದೆ ಮನದೊಳಗೆ ಗದ್ದುಗೆ ಸ್ಥಾಪಿಸಿಕೊಂಡಿವೆ. ಒಂದು ಲೆಕ್ಕದಿಂದ ಪಾರಾಗಲು ಇನ್ನೊಂದು ಲೆಕ್ಕದ ತೆಕ್ಕೆಯೊಳಗೆ ಸಿಕ್ಕು ಹಾಕಿಕೊಳ್ಳಲಾಗುತ್ತಿದೆ. ಕೇವಲ ಮನುಷ್ಯ ಸಂಬಂಧವಿಲ್ಲದ ಗತ್ತು-ಗಮ್ಮತ್ತುಗಳಲ್ಲಿ ಬದುಕಿನ ಲೆಕ್ಕ ಮತ್ತು ದಿಕ್ಕು ತಪ್ಪುವುದು, ಸದ್ಗುಣಗಳನ್ನು ಲೆಕ್ಕಿಸದೇ ಬದುಕುವುದು ಜಂಗಲ್ ರಾಜ್ಯ ಸೃಷ್ಟಿಯ ಕ್ರಮವೇ ಆಗುವ ಹಂತ ತಲುಪಿದೆ. ವಿವೇಕ, ಅರಿವು-ಆಚಾರ, ಸದಾಚಾರ, ನಿಜವನರಿತು ಬದುಕುವುದಲ್ಲೂ ಒಂದು ಲೆಕ್ಕವಿದೆ ಎಂಬ ಎಚ್ಚರಿಕೆಯನ್ನು ಸದಾ ಇಟ್ಟುಕೊಳ್ಳದೇ ಹೋಗಿದ್ದರ ಪರಿಣಾಮವೇ ಮನುಷ್ಯ ಇಂದು ಆರೋಗ್ಯ ಆರ್ಥಿಕ, ಸತ್ಸಂಗದೊಳಗೆ ಬಳಲಿಕೆಗೆ ಒಳಗಾಗಿದ್ದಾನೆ. 'ಅಳೆಯುತ್ತ ಅಳೆಯುತ್ತ ಬಳಲುವರಲ್ಲದೆ ಕೊಳಗೆ ಬಳಲುವುದೆ? ನಡೆಯುತ್ತ ನಡೆಯುತ್ತ ಬಳಲುವರಲ್ಲದೆ ಬಟ್ಟೆ ಬಳಲುವುದೆ? ಶ್ರವವ ಮಾಡುತ್ತ ಮಾಡುತ್ತ ಬಳಲುವರಲ್ಲದೆ ಕೋಲು ಬಳಲುವುದೆ? ನಿಜವನರಿಯದ ಭಕ್ತ ಬಳಕುವವನಲ್ಲದೆ ಲಿಂಗ ಬಳಲುವುದೆ? ಕೂಡಲಸಂಗಮದೇವಾ, ಅರಸರಿಯದ ಬಿಟ್ಟಿಯೋ!'

ಬಸವಣ್ಣನವರದು ತ್ರಿಕರಣ ಶುದ್ಧಿಯ ಚಿಂತನೆ ಮತ್ತು ನಡೆಯಾಗಿದ್ದರಿಂದ ಬದುಕನ್ನು ತೀರ ಹತ್ತಿರದಿಂದ ಕಂಡವರೆಂಬುದಕ್ಕೆ ಈ ವಚನವೇ ಸಾಕ್ಷಿ. ಅವರ ಅನುಭಾವ ಜೀವನ್ನುನ್ನತಿಯ ಸೋಪಾನ. ಮಾನವೀಯ ಬದುಕಿನ ಹಿತಿ-ಮಿತಿಗಳನ್ನರಿತು ಜೀವಂತಿಕೆಯನ್ನುಳಿಸಿಕೊಂಡು ಬದುಕುವ ದಾರಿಯನ್ನು ನಮಗೆ ತೋರಿಸಿದ್ದಾರೆ. ನಿಜವನರಿಯುವುದು ಅಂದರೆ ನಿರ್ಭಯತೆ-ನಮ್ರತೆ ಬಳಸುವುದೇ ಆಗಿದೆ. ನಿರ್ಭಯತೆ ಮತ್ತು ನಮ್ರತೆಗಳನ್ನು ಬದುಕಿನ ಭಾಗವನ್ನಾಗಿರಿಸಿಕೊಂಡಲ್ಲಿ ಜಗತ್ತಿನ ಎಲ್ಲ ವ್ಯವಹಾರಗಳು ಅಳತೆಯೊಳಗೆ ಇರುತ್ತವಲ್ಲದೆ ಅಳೆಯುವ ಹುಚ್ಚಿನ ಪ್ರಮೇಯಿಂದಲೂ ಬಿಡುಗಡೆ ದೊರೆಯುತ್ತದೆ. ಮನುಷ್ಯ ಸಂವೇದನೆ ಜಾಗೃತಗೊಳಿಸಿಕೊಳ್ಳುವುದು ಅಗತ್ಯವೆಂದಿರುವ ಶರಣರು ಮಾನವನ ಬದುಕಿನ ವಾಸ್ತವತೆಯೊಳಗೆ ಕಟ್ಟಿಕೊಳ್ಳಲು ಮಾರ್ಗ ತೋರಿಸಿದ್ದಾರೆ. ಚೈತನ್ಯ ಶೀಲವಾಗಿರುವ ಈ ಬದುಕು ಕೇವಲ ಕನವರಿಕೆಯ ಕಸರತ್ತು ಆಗಬಾರದು. ಬಳಲಿಕೆಗೂ ಗುರಿಯಾಗಬಾರದೆಂಬುದು ಶರಣರ ಅಭಿಮತವಾಗಿದೆ. ✪

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಓದುಗರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಪತ್ರಿಕೆ ಮುನ್ನಡೆ ಅಸಾಧ್ಯವಾಗಿದೆ. ಪೇಪರ್, ಪ್ರಿಂಟಿಂಗ್, ಪೋಸ್ಟೇಜ್ ಇನ್ನಿತರೆ ಖರ್ಚು ವೆಚ್ಚಗಳು ದುಬಾರಿಯಾಗಿದೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಪ್ರಸಾರ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಹಿಂಜರಿತ ದಯವಿಟ್ಟು ಅರ್ಥಮಾಡಿಕೊಳ್ಳಿ.

**ಪ್ರಸ್ತುತ ಆಜೀವ ಚಂದಾ ೨೦೧೪ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಬೇಕು.**

ನಿಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತ **ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ ನಗದು/ಚೆಕ್/ ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ LM ನಂಬರ್ ಸೂಚಿಸಿ** ಈ ವಿಳಾಸಕ್ಕೆ ಕಳುಹಿಸಬೇಕಾಗಿ ಕೋರುತ್ತೇವೆ.

**'ಸಿದ್ಧಗಂಗಾ'** ಮುನ್ನಡೆಗೆ ಬಾಕಿ ಸಂದಾಯ ಮಾಡಿ ಸಹಕರಿಸಬೇಕಾಗಿ ನಮ್ರ ವಿನಂತಿ.

**ಪ್ರಕಾಶಕರು, 'ಸಿದ್ಧಗಂಗಾ'** ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.

# ವ್ಯಕ್ತಿತ್ವ ವಿಕಸನಕ್ಕೆ(ಓದು) ಅಧ್ಯಯನವೇ ಮುಖ್ಯ

–ಡಾ. ಆರ್.ಬಿ. ಚಿಲುಮಿ *

ತಮಿಳುನಾಡಿನ ತೂತ್ತುಕುಡಿಯಲ್ಲಿ ಸಾಮಾನ್ಯ ಗ್ರಂಥಪಾಲರಾಗಿದ್ದ 'ಕಲ್ಯಾಣಸುಂದರಮ್' ಎಂಬುವವರು ತಮಗೆ ತಂದ ವೇತನದಲ್ಲಿ ಒಂದು ಪೈಸೆಯನ್ನೂ ತಮ್ಮ ಸ್ವಂತ ಬದುಕಿಗಾಗಿ ಖರ್ಚು ಮಾಡದೇ ವಿದ್ಯಾರ್ಥಿಗಳಿಗೆ ಹಾಗೂ ಗ್ರಂಥಾಲಯ ಬೆಳವಣಿಗೆಗೆ ಖರ್ಚು ಮಾಡಿದರಂತೆ. ಇದನ್ನು ಗಮನಿಸಿದ ಅಮೆರಿಕಾ ಸರ್ಕಾರ 'ಸಹಸ್ರಮಾನದ ಅತ್ಯುತ್ತಮ ವ್ಯಕ್ತಿ' ಎಂಬುದಾಗಿ ಪ್ರಶಸ್ತಿ(ಬಿರುದು) ನೀಡಿ ಮೂವತ್ತು ಕೋಟಿ ರೂಪಾಯಿಗಳನ್ನು ಕೊಟ್ಟಿತು. ಅದನ್ನೂ ಬಡವರ ಕಲ್ಯಾಣಕ್ಕೆ ನೀಡಿದರಂತೆ ಕಲ್ಯಾಣಸುಂದರಂ! ಹಾಗೆಯೇ ಭಾರತ ದೇಶದ ಡಾ. ರಂಗರಾಜನ್‌ರ ಸೇವೆಯೂ ಇವರಂತಾಗಿತ್ತು. ಆದುದರಿಂದ ಇವರ ಸೇವೆಯನ್ನು ಪರಿಗಣಿಸಿ, ಗುರುತಿಸಿ ಪ್ರತೀವರ್ಷ ದಿನಾಂಕ. ೧೨ ಆಗಸ್ಟ್ ಮಾಸಿಕದಲ್ಲಿ 'ಗ್ರಂಥಪಾಲಕರ ದಿನಾಚರಣೆ'ಯನ್ನಾಗಿ ಆಚರಿಸಲಾಗುತ್ತದೆ. ಧಾರವಾಡದ ವಿದ್ಯಾವರ್ಧಕ ಸಂಘದಲ್ಲಿ ಪ್ರತೀ ವರ್ಶದಂತೆ ದಿನಾಂಕ ೧೨–೦೮–೨೦೦೩ರಂದು ಡಾ.ಜಿ.ಬಿ. ಹೊಂಬಳ ಅವರು ತಮ್ಮ ಮಾತೋಶ್ರೀ ಪಾರ್ವತಮ್ಮ ಹೊಂಬಳ ಸ್ಮಾರಕ ದತ್ತಿ ಕಾರ್ಯಕ್ರಮವನ್ನು ಆಚರಿಸಲಾಯಿತು. ಈ ನಾಡಿನ ಶ್ರೇಷ್ಠ ಗ್ರಂಥ ವಿಜ್ಞಾನಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾದ ಡಾ.ಎಸ್.ಆರ್. ಗುಂಜಾಳ ಅವರು ಅಧ್ಯಕ್ಷತೆ ವಹಿಸಿದ್ದರು. ಅವರು ಈ ಮೇಲಿನಂತೆ ಪುಸ್ತಕದ ಪ್ರೇಮವಿರಲೆಂದು ಬಣ್ಣಿಸಿದರು. ಅವರು ಈ ಮೇಲಿನಂತೆ ಪುಸ್ತಕದ ಪ್ರೇಮವಿರಲೆಂದು ಬಣ್ಣಿಸಿದರು. ಪ್ರಜಾವಾಣಿ ಪತ್ರಿಕೆಯ ನಿವೃತ್ತ ಸಹ ಸಂಪಾದಕ ಗೋಪಾಲಕೃಷ್ಣ ಹೆಗಡೆಯವರು ಸುಂದರಂ ಗ್ರಂಥಪಾಲಕರ ಕುರಿತು ಬಹು ಸುಂದರವಾಗಿ ಹೇಳುತ್ತ 'ವ್ಯಕ್ತಿತ್ವ-ವಿಕಸನಕ್ಕಾಗಿ ಓದು' ಎಂಬ ವಿಷಯದ ಕುರಿತು ಬಹು ಸ್ವಾರಸ್ಯವಾಗಿ ವಿವರಿಸುತ್ತ ಉಪನ್ಯಾಸ ನೀಡಿದ್ದು ಮನನೀಯವಾಗಿತ್ತು. ಮೈಯೆಲ್ಲಾ ಕಿವಿಯಾಗಿಸಿಕೊಂಡು ಕೇಳುವಂತಿತ್ತು.

ಇಂದು ಓದಿನ ಅವಶ್ಯಕತೆಯಿದೆ. ಇಂದಿನ ದಿನಮಾನಗಳಲ್ಲಿ ಶಿಕ್ಷಕರು, ಪತ್ರಕರ್ತರು, ಪುಸ್ತಕ–ಪತ್ರಿಕೆಯನ್ನು ಓದದೇ ಇರುವುದರಿಂದ ಸಮಾಜ ಕೆಡುಕಿನತ್ತ ಸಾಗುತ್ತಿದೆ. ಸಾಕಷ್ಟು ಸಂಖ್ಯೆಯಲ್ಲಿ ಗ್ರಂಥಾಲಯಗಳಿಲ್ಲದೆ ಇರುವುದರಿಂದ ಸಮಾಜದಲ್ಲಿ ಅಜ್ಞಾನಿಗಳ, ಅವಿವೇಕಿಗಳ ಸಂಖ್ಯೆ ಹೆಚ್ಚಾಗುತ್ತಿದೆ. ವಿದ್ಯಾವಂತ ಯುವಕರೇ ಉಗ್ರಮಾನಿ, ಭಯೋತ್ಪಾದಕ ಚಟುವಟಿಕೆಗಳಲ್ಲಿ ತೊಡಗಿರುವುದು ವಿಷಾದನೀಯ. ಅದಕ್ಕಾಗಿ ಓದು ಇಂದಿನ ಕಾಲದ ಅಗತ್ಯತೆಯಾಗಿದೆ. ಲ್ಯಾಪ್‌ಟಾಪ್, ಮೊಬೈಲ್ ಪೋನ್‌ಗಳಲ್ಲಿಯೂ ಪುಸ್ತಕಗಳನ್ನು ಓದಬಹುದು. ಆದರೆ ಪುಸ್ತಕವನ್ನು ಕೈಯಲ್ಲಿ ಹಿಡಿದು ಓದಿಕೊಂಡ ಅನುಭವ ಸಿಗಲಾರದು' ಎನ್ನುವ ಡಾ. ಎಸ್.ಆರ್. ಗುಂಜಾಳ ಅವರು ಅದಕ್ಕೆ ಪೂರಕವಾಗಿ ಬಸವಣ್ಣನವರ ವಚನವೊಂದನ್ನು ಉದಾಹರಿಸುತ್ತಾರೆ

*ಬಲವಿಲ್ಲದ ಪೂಜೆ ನೇಹವಿಲ್ಲದ ಮಾಟ*
*ಆ ಪೂಜೆಯೂ, ಆ ಮಾಟವೂ*
*ಚಿತ್ರದ ರೂಹು ಕಾಣಿರಣ್ಣಾ !*
*ಅಪ್ಪಿದರೆ ಸುಖವಿಲ್ಲ, ಮೆಲ್ಲಿದರೆ ರುಚಿಯಿಲ್ಲ*
*ಕೂಡಲಸಂಗಮದೇವ ನಿಜವಿಲ್ಲದ ಒಣಭಕ್ತಿ*

ಚಿತ್ರದಲ್ಲಿ ಕಂಡ ಹಣ್ಣನ್ನು ತಿನ್ನಲು ಯತ್ನಿಸಿದರೆ ರುಚಿ ಎನ್ನಿಸುವುದಿಲ್ಲ. ಅಂತೆಯೇ ಲ್ಯಾಪ್‌ಟಾಪ್, ಮೊಬೈಲ್‌ನಲ್ಲಿ ಪುಸ್ತಕ ಓದಿದರೆ ನೈಜ ಓದಿದ ಅನುಭವ, ಸುಖವೇ ಸಿಗುವುದಿಲ್ಲ ಎನ್ನುತ್ತಾರೆ. ಡಾ. ಗುಂಜಾಳರು ತಮ್ಮೂರಿನಲ್ಲಿ ಮಾತೋಶ್ರೀ ರುದ್ರಮ್ಮ ಸ್ಮಾರಕ ಪ್ರಾಥಮಿಕ ಶಾಲೆಯಲ್ಲಿ ಗ್ರಂಥಾಲಯದಲ್ಲಿರುವ ಎಲ್ಲ ಪುಸ್ತಕಗಳನ್ನು ಓದಿ. ಮನನ ಮಾಡಿಕೊಂಡವರಿಗೆ, ಮಾಡಿಕೊಳ್ಳುವವರಿಗೆ, ಪುಸ್ತಕ ಓದಿದವರಿಗೆ, ಪುಸ್ತಕ ಓದಿಸಿದವರಿಗೆ ಬಹುಮಾನ(ಇನಾಮು) ಘೋಷಿಸಿದ್ದಾರೆ. ಇದು ಇಂದಿನ ಯುವಕರನ್ನು ಓದಿನತ್ತ ಗಮನ ಸೆಳೆಯಲೆಂದು ಮಾಡಿದ ತಕ್ಕ ಯೋಜನೆ ಯೋಚನೆಯಾಗಿದೆ. ಇವರಂತೆ ಎಲ್ಲಾ ಊರಿನ ಶಿಕ್ಷಕರು, ವಿದ್ಯಾರ್ಥಿಗಳು ಗ್ರಂಥಾಲಯಗಳ ಸದುಪಯೋಗಮಾಡಿಕೊಳ್ಳುವಂತಾಗಬೇಕು.

* 'ಹೊಂಬೆಳಕು', ಮನೆ ನಂ. ೩, ಓಂ ಸ್ಕೂಲ್ ಹತ್ತಿರ, ಜಲದರ್ಶಿನಿ ನಗರ, ಧಾರವಾಡ– ೫೮೦ ೦೦೩.





ಗ್ರಂಥಗಳು ಜಗತ್ತನ್ನು ಆಳಬಲ್ಲವು. ಅವು ಜ್ಞಾನಶಕ್ತಿಯ ತವನಿಧಿ

ಗ್ರಂಥಗಳು ವ್ಯಕ್ತಿಗಳ; ಜನಾಂಗಗಳ ಇತಿಹಾಸವನ್ನೇ ಬದಲು ಮಾಡಬಲ್ಲವು. ಗ್ರಂಥಗಳು ನಿರ್ಜೀವವಾಗಿದ್ದರೆ, ನಿಸ್ಸತ್ವವಾಗಿದ್ದರೆ, ನಿರುಪಯುಕ್ತವಾಗಿದ್ದರೆ ಅವುಗಳಿನ್ನಾರು ಬಹಿಷ್ಕರಿಸುತ್ತಿದ್ದರು: ಗಡಿಪಾರು ಮಾಡುತ್ತಿದ್ದರು? ಸುಡುತ್ತಿದ್ದರು? ಆದುದರಿಂದ ಪುಸ್ತಕ ನಿರ್ಜೀವ ವಸ್ತುವಲ್ಲ. ಅದೊಂದು ಜ್ಞಾನಶಕ್ತಿಯ ತವನಿಧಿ; ಅದೊಂದು ಜೀವಂತ ಭಾವಾನುಭವ ಆಲೋಚನೆಗಳ ವಿದ್ಯುದಾಗರ. ಭವವತಿಯ ಆವಾಸ, ಅದೊಂದು ನಂದಾದೀಪ. ವ್ಯಾಸಂಗದಿಂದ ಚಿಂತನೆಗೆ, ಪುಷ್ಟಿಯೊದಗುತ್ತದೆ. ತರ್ಕಕ್ಕೆ, ಪ್ರಚೋದನೆಗೆ ಪ್ರಖರ ನೀಡುತ್ತದೆ. ಓದಿನ ಅನುಭವಗಳ ಸಂಘರ್ಷದಿಂದ ಹೊಸ ಅನುಭವ ಸಂಭವಿಸುತ್ತದೆ. ಭಾವಾನುಭವಗಳ ರೂಪದಲ್ಲಿ ಸರಸ್ವತಿ ಶಕ್ತಿಯೇ ಪುಸ್ತಕಗಳಲ್ಲಿ ಪ್ರವಹಿಸುವುದರಿಂದ ಅದನ್ನು ಹಲವರು ಆರಾಧ್ಯ ವಿಗ್ರಹವನ್ನಾಗಿಯೂ ಪೂಜಿಸುವರು. ಸಿಖ್ಖರು ಮೂರ್ತಿಪೂಜೆಗೆ ಬದಲಾಗಿ ಗ್ರಂಥ ಸಾಹೇಬ್ ಪೂಜೆಗೆ ತಮ್ಮನ್ನು ತಾವು ಅರ್ಪಿಸಿಕೊಂಡಿದ್ದಾರೆ. ಆಳಿ ಹೋದ ರಾಜ–ಮಹಾರಾಜರ ಅಧಿಕಾರ–ಆಳ್ವಿಕೆ ಕ್ಷಣಿಕವಾದದ್ದು; ಮಹಾಕೃತಿಗಳ ಆಳ್ವಿಕೆ ಶಾಶ್ವತವಾದದ್ದು. ರಾಮಾಯಣ, ಮಹಾಭಾರತ, ಭಗವದ್ಗೀತೆ, ಉಪನಿಷತ್ತು, ಬೈಬಲ್, ಕುರಾನ್, ಪುರಾಣ, ಷೇಕ್ಸ್‌ಪಿಯರನ ನಾಟಕಗಳು ಈಗಲೂ ಮನುಕುಲದ ದಾರಿದೀಪಗಳಾಗಿವೆ. ಮಹಾಪ್ರಭಾವ ಶಕ್ತಿಗಳಾಗಿವೆ. ಚಾಣಕ್ಯನ ಅರ್ಥಶಾಸ್ತ್ರ, ಮೆಕೆವೆಲ್ಲಿಯ 'ದಿ ಪ್ರಿನ್ಸ್' ಆಡಂ ಸ್ಮಿತ್‌ನ 'ವೆಲ್ತ್ ಆಫ್ ನೇಶನ್ಸ್', ಕಾರ್ಲ್‌ಮಾರ್ಕ್ಸ್‌ನ 'ದಾಸ್ ಕ್ಯಾಪಿಟಲ್' ಇಂಥ ಮೊದಲಾದ ಗ್ರಂಥಗಳು ಲೋಕದ ಬೆಳವಣಿಗೆಗೆ, ನಾಗರೀಕತೆಯ ತಿರುವಿಗೆ, ಮಾನವ ಜೀವನದ ಪರಿವರ್ತನೆಗೆ ನೆರವಾಗಿವೆಯೆಂಬುದರಲ್ಲಿ ಅನುಮಾನವೇ ಇಲ್ಲ. ಭರತಖಂಡದಲ್ಲಿ ಸಹ ಬುದ್ಧ, ಬಸವೇಶ್ವರ, ವಿವೇಕಾನಂದ, ಮಹಾತ್ಮಾ ಗಾಂಧೀಜಿ, ಬಾಬಾ ಸಾಹೇಬ್ ಅಂಬೇಡ್ಕರ್‌ರ ಕೃತಿಗಳು ಭಾರತೀಯರ ಮೇಲೆ ಪ್ರಭಾವದ ಮುದ್ರೆ ಬೀರಿವೆ. ಒಟ್ಟಿನಲ್ಲಿ ಜಗತ್ತನಾಳುವಲ್ಲಿ ಪುಸ್ತಕಗಳು ನೆರವಾಗಿವೆ ಮತ್ತು ಯಶಸ್ವಿಯಾಗಿವೆಯೆಂದು ಹೇಳಬಹುದು. ಆದುದರಿಂದ ವ್ಯಕ್ತಿತ್ವ ವಿಕಸನದ ಸಾಧನವಾಗಿದೆ.

'ಫಲಪುಷ್ಪಗಳಿಲ್ಲದ ತರುಮರಗಳು ಹಾಗೂ ಪುಸ್ತಕಗಳಿಲ್ಲದ ಮನೆ ಮಸಣಕ್ಕೆ, ನೀರಿಲ್ಲದ ಕೆರೆಗೆ, ಉಸಿರಿಲ್ಲದ ದೇಹಕ್ಕೆ ಸಮ' ಎಂದು ಹೇಳಿದ ದೇ.ಜ.ಗೌ. ಅವರು ಹೇಳಿದ ಮಾತನ್ನಿಲ್ಲಿ ಸ್ಮರಿಸಿಕೊಳ್ಳಬಹುದು. ಪುಸ್ತಕವಿಲ್ಲದ ಕೋಣೆ ರುಂಡವಿಲ್ಲದ ದೇಹವಿದ್ದಂತೆ. ಗ್ರಂಥಾಲಯವೊಂದು ಪವಿತ್ರ ದೇವಸ್ಥಾನ. ಎಲ್ಲ ಕಾಲದೇಶಗಳ ಸಂಗಮ ಸ್ಥಾನವೆಂದರೆ ಗ್ರಂಥ–ಗ್ರಂಥಾಲಯ. ಗ್ರಂಥಾಲಯವೊಂದು ಜ್ಞಾನದ ದೇಗುಲವಿದ್ದಂತೆ. ಸಮಸ್ತ ಲೋಕದ ಕವಿ, ಗುರು, ಸಾಧು–ಸಂತ, ವಿಜ್ಞಾನಿ, ಮಹಾಪುರುಷ, ಮಹಾರಾಜರು, ಮಹಾಯೋಧರ, ಕಲಾವಿದರ ನಿತ್ಯ ಸಮ್ಮೇಳನ ಅಲ್ಲಿ ಜರುಗುತ್ತಲಿದೆ. ಗ್ರಂಥಾಲಯಕ್ಕೆ ಹೋಗುವವರು ದೇವಾಲಯಕ್ಕೆ ಹೋಗಬೇಕಾಗಿಲ್ಲ. ದೇವಾಲಯಗಳು ಅನಾಚಾರದ ಕೊಂಪೆಗಳು. ಪೂಜಾರಿಗಳು ಭಕ್ತಿಲವಲೇಶವೂ ಇಲ್ಲದ ವಂಚಕರು, ಹತ್ತಾರು ವರುಷ ಪೂಜಾರಿಗಳಾಗಿರುವವರಿಗೆ ಭಗವಂತನ ಸಾಕ್ಷಾತ್ಕಾರವಾಗದಿರುವಾಗ ಎಂದೋ ಒಮ್ಮೆ ಹೋದವರಿಗೆ ಹೋಗಿ ವಂಚಕರಿಂದ 'ಪೂಜೆ ಮಾಡಿಸುವವರಿಗೆ ಭಗವದ್ದರ್ಶನವು ಸಾಧ್ಯವೇ? ಎನ್ನುತ್ತಾರೆ ದೇ. ಜವರೇಗೌಡರು.

ಪುಸ್ತಕಗಳನ್ನು(ಗ್ರಂಥಗಳನ್ನು) ಕುರಿತು ವಿವಿಧ ವಿದ್ವಾಂಸರ ಅಭಿಪ್ರಾಯಗಳಿಂತಿವೆ.

೧. ರಿಚರ್ಡ್ ಡೀ ಬರಿ: ಓ ಪುಸ್ತಕಗಳೇ, ನೀವು ದೇವ ಮಂದಿರದ ಚಿನ್ನದ ಪಾತ್ರೆಗಳು; ಕೈಯಲ್ಲಿ ಹಿಡಿಯಬಹುದಾದ ಪ್ರಜ್ವಲಿಸುವ ಜ್ಯೋತಿಗಳು.

೨. ಕ್ರಿಶ್ಚಿಯನ್ ಬೋವಿ: ಪುಸ್ತಕಗಳೆಂದರೆ ಸಂರಕ್ಷಿಸಲ್ಪಟ್ಟ ಆತ್ಮಗಳಿದ್ದಂತೆ.

೩. ಬ್ರದರ್‌ಟಮ್ : ನಮಗೆ ಆಹಾರವಿಲ್ಲದಿದ್ದರೂ ಪರವಾಗಿಲ್ಲ ಪುಸ್ತಕಗಳಿರಬೇಕು.

೪. ಡಾ. ಆರ್.ಬಿ. ಚಿಲುಮಿ: ಪುಸ್ತಕಗಳೇ ನೆತ್ತಿಗೆ ಆಹಾರವಿದ್ದಂತೆ.

೫. ಮಾರ್ಟಿನ್ ಟುಪ್ಪರ್: ಉತ್ತಮ ಗ್ರಂಥವು ಇಂದು, ಎಂದೆಂದಿಗೂ ಅತ್ಯುತ್ಕೃಷ್ಟವಾದ ಸ್ನೇಹಿತನಿದ್ದ ಹಾಗೆ.

೬. ಕಾರ್ಲೋಗೊಲ್ಲೇಗಿ– ಪ್ರಪಂಚವು ಅದ್ಭುತವಾದ ಪುಸ್ತಕ. ಆದರೆ ಅದನ್ನು ಓದಲು ಬಾರದವನಿಗೆ ಅದು ನಿರುಪಯುಕ್ತ

೭. ಜೋಸೆಫ್ ಎಡಿಸನ್: ಪುಸ್ತಕಗಳು ಇನ್ನೂ ಹುಟ್ಟಲಿರುವ ಜನಾಂಗದ ಆಸ್ತಿ.

೮. ಥಾಮಸ್ ಕಾರ್ಲೈಲ್ : ಒಳ್ಳೆಯ ಪುಸ್ತಕ ಸಂಗ್ರವೇ ಒಂದು ವಿಶ್ವವಿದ್ಯಾಲಯ.

೯. ರಿಚರ್ಡ್: ಪುಸ್ತಕ ಚಿಂತನೆ ಮಾಡಿಸುವ ಒಂದು ಯಂತ್ರ

೧೦. ಲಾಂಗ್‌ಫೋರ್ಡ್: ಪುಸ್ತಕ ಪ್ರೇಮವಿಲ್ಲದವನು ಹಣವಂತನಾದರೂ ದರಿದ್ರನೇ.

೧೧. ರಸ್ಕಿನ್: ಪುಸ್ತಕವು ಓದಲು ಅರ್ಹವಾದಲ್ಲಿ ಕೊಳ್ಳಲೂ ಅರ್ಹವೇ.

೧೨. ಎಮರ್ಸನ್: ಒಳ್ಳೆಯ ಓದುಗನಿಂದಷ್ಟೇ ಒಳ್ಳೆಯ ಪುಸ್ತಕ ರಚಿಸಲು ಸಾಧ್ಯ.

೧೩. ನೆಪೋಲಿಯನ್: ಒಂದು ಲಕ್ಷ ಬಂದೂಕುಗಳಿಗೆ ಹೆದರುವಷ್ಟು ನಾನು ಮೂರು ಪತ್ರಿಕೆಗಳಿಗೆ ಹೆದರುತ್ತೇನೆ.

೧೪. ಪಾರ್ಕರ್: ಎರವಲು ಗ್ರಂಥಗಳನ್ನು(ಸ್ವಂತ ಸಂಗ್ರಹದಿಂದ) ಕೊಡಬೇಡಿ. ಯಾರೂ ಅವುಗಳನ್ನು ಹಿಂದಿರುಗಿಸುವುದಿಲ್ಲ. ಏಕೆಂದರೆ ನನ್ನ ಬಳಿಯಿರುವ ಗ್ರಂಥಗಳೆಲ್ಲ ಬೇರೆಯವರ ಸಂಗ್ರಹದಿಂದ ಎರವಲಾಗಿ ಬಂದವುಗಳೇ ಆಗಿವೆ.

೧೫. ಮೆಂಕೇನ್: ಒಳ್ಳೆಯ ಗ್ರಂಥವನ್ನು ಓದದ ಸುಶಿಕ್ಷಿತನಿಗೂ ಅವುಗಳನ್ನು ಓದಲು ಅರಿಯದ ನಿರಕ್ಷರಿಗೂ ವ್ಯತ್ಯಾಸವೇ ಇಲ್ಲ.

೧೬. ಓಲಿವರ್ ಲಿಟ್ಟನ್ : ಶಾಸನಗಳು ಸಾಯುತ್ತವೆ, ಆದರೆ ಗ್ರಂಥಗಳಿಗೆ ಸಾವಿಲ್ಲ.

೧೭. ಸಿಸಿರೋ: ಗ್ರಂಥವಿಲ್ಲದ ಕೋಣೆ; ಆತ್ಮವಿಲ್ಲದ ದೇಹವಿದ್ದಂತೆ.

೧೮. ಎಮರ್ಸನ್ : ಪುಸ್ತಕಗಳು ಆಯಾ ಕಾಲದ ಸಂಸ್ಕೃತಿಯ ಜೀವಂತ ಪ್ರತೀಕ.

೧೯. ಬರ್ನಾರ್ಡ್ ಷಾ: ವಿಚಾರಗಳ ಯುದ್ಧದಲ್ಲಿ ಪುಸ್ತಕಗಳೇ ಅಸ್ತ್ರಗಳಾಗುತ್ತವೆ.

೨೦. ಯಹೂದಿಯರು : ಇವರ ಧರ್ಮಗ್ರಂಥಕ್ಕೆ 'ತಾಲಮುಡ' ಎಂದು ಹೆಸರು. ಯಹೂದಿಯರು ಅನುಯಾಯಿಗಳಿಗೆ ಗ್ರಂಥದ ಮಹತ್ವತೆಯ ಬಗ್ಗೆ ಹೀಗೆ ಹೇಳಿದ್ದಾರೆ.

'ನಿಮ್ಮ ಮಕ್ಕಳು ನಿಮ್ಮನ್ನು ಸದಾ ಸ್ಮರಿಸುತ್ತಲೇ ಇರಬೇಕೆಂದು ನೀವು ಬಯಸಿದ್ದಾದರೆ ಒಂದು ಗುಡಿಸಲು ಕಟ್ಟಿಸಿರಿ. ನಿಮ್ಮ ಮೊಮ್ಮಕ್ಕಳು ನಿಮ್ಮನ್ನು ಸದಾ ಸ್ಮರಿಸುತ್ತಲೇ ಇರಬೇಕೆಂದು ನೀವು ಬಯಸಿದ್ದಾದರೆ ಒಂದು ಕಲ್ಲಿನ ಮೇಲೆ ರಚಿಸಿರಿ. ನಿಮ್ಮ ಮರಿಮೊಕ್ಕಳು ನಿಮ್ಮನ್ನು ಸದಾ ಸ್ಮರಿಸುತ್ತಲೇ ಇರಬೇಕೆಂದು ನೀವು ಬಯಸಿದ್ದಾದರೆ ಒಂದು ಕೋಟೆ ಕಟ್ಟಿಸಿರಿ. ನಿಮ್ಮ ಪೀಳಿಗೆ ನಿಮ್ಮನ್ನು ಸದಾ ಸ್ಮರಿಸುತ್ತಲೇ ಇರಬೇಕೆಂದು ನೀವು ಬಯಸಿದ್ದಾದರೆ ಒಂದು ಗ್ರಂಥ ರಚಿಸಿರಿ'–ಎಂದಿದ್ದಾರೆ.

೨೧. ಹಂಗೇರಿಯನ್ನರು–ಒಬ್ಬ ಸತ್ಪುತ್ರನನ್ನು ಪಡೆಯುವುದು, ಇಲ್ಲವಾದಲ್ಲಿ ಒಂದು ಶ್ರೇಷ್ಠ ಗ್ರಂಥ ರಚಿಸುವುದು, ಇದೂ ಸಾಧ್ಯವಾಗದಿದ್ದಲ್ಲಿ ಒಂದು ನೂರು ಹಣ್ಣಿನ ಮರಗಳನ್ನು ನೆಟ್ಟು ಬೆಳಸುವುದು.

೨೨. ಸ್ವಾಮಿವಿವೇಕಾನಂದರು: ಒಳ್ಳೆಯ ಗ್ರಂಥವನ್ನು ಕೊಂಡು ಓದಿರಿ, ಎರವಲಾದರೂ ಪಡೆಯಿರಿ. ಕದ್ದಾದರೂ ತಂದು ಓದಿರಿ.

೨೩. ಡಾ. ಗುಂಜಾಳರು ಗ್ರಂಥಗಳು ಮನಸ್ಸಿಗೆ ಮುಟ್ಟುತ್ತವೆ; ಹೃದಯವನ್ನು ತಟ್ಟುತ್ತವೆ; ಭಾವದಲ್ಲಿ ನಾಟುತ್ತವೆ; ರಕ್ತದಲ್ಲಿ ಪ್ರವಹಿಸುತ್ತವೆ; ನಾಡಿಯಲ್ಲಿ ಮಿಡಿಯುತ್ತವೆ; ಬುದ್ಧಿಯನ್ನು ಬೆಳಗುತ್ತವೆ; ಜೀವನವನ್ನು ಅರಳಿಸುತ್ತವೆ.

ಈ ಎಲ್ಲ ಹೇಳಿಕೆಗಳನ್ನು ಗಮನಿಸಿದರೆ ಓದು ಅತಿ ಅವಶ್ಯ ಓದಿನಿಂದ ಮನೋಕಾಯಿಲೆ ಮುಂತಾದ ವ್ಯಾಧಿಗಳು ವಾಸಿಯಾಗಿವೆ. ಊಟ–ಉಸಿರುಗಳಂತೆ ಓದು ಬದುಕಿನ ಸಹಜಕ್ರಿಯೆಯಾಗಬೇಕು. ಶಿಕ್ಷಕರು, ಅಧ್ಯಾಪಕ–ಪ್ರಾಧ್ಯಾಪಕರು, ಸಂಶೋಧಕರು ವಾಚನಾಭಿರುಚಿಯನ್ನು ಬೆಳೆಸಿಕೊಳ್ಳಬೇಕು. ಕೇವಲ ಬೋಧನೆಯೊಂದೇ ಸಾಲದು. ಪುಸ್ತಕಗಳಂಥ ಸಂಗಾತಿ, ಆಪ್ತಮಿತ್ರ–ಬಂಧುಮಿತ್ರ ಯಾರೂ ಇಲ್ಲ. ಪುಸ್ತಕಗಳನ್ನು ನಂಬಿದವರಿಗೆ ಎಂದೆಂದೂ ಮೋಸ ಮಾಡುವುದಿಲ್ಲ. ಅವು ಎಂದೆಂದಿಗೂ ಓದುಗರ ಕಲ್ಯಾಣವನ್ನು ಬಯಸುತ್ತವೆ. ಸುಪ್ರಸಿದ್ಧ ಪ್ರಬಂಧಕಾರ ಬೇಕನ್ ಹೇಳಿದಂತೆ– 'Reading Maketh a full man, conference a ready man, writing an exact man' -ಓದು ಹೊಸ ಅನುಭವಕ್ಕೆ ಪ್ರೇರಣೆ ನೀಡುತ್ತದೆ. ಅದರಿಂದ ಬುದ್ಧಿಶಕ್ತಿ ಚುರುಕಾಗುತ್ತದೆ, ಬೆಳೆಯುತ್ತದೆ. ಅದನ್ನು ಅರಗಿಸಿಕೊಂಡಾಗ ಮಾತ್ರ ಸರ್ವಫಲ ಗಳೂ ದೊರೆಯುತ್ತವೆ. ಅರಗಿಸಿಕೊಳ್ಳದ ಓದು ಬೀಜ ನುಂಗಿದ ಆಡಿನಂತೆ ನಿರರ್ಥಕವೆಂದಿದ್ದಾರೆ ಜ್ಞಾನಿಗಳು.





# ಕಷ್ಟಗಳು ಪಲಾಯನವಾಗುವುದಕ್ಕಲ್ಲ.....

–ಡಾ॥ ರಾಜಶೇಖರ ಜಮದಂಡಿ *

ಕಷ್ಟಗಳು ಮನುಷ್ಯನಿಗೆ ಬರದೇ ಮರಕ್ಕೆ ಬರುತ್ತವೆಯೇ? ಕಷ್ಟವಿಲ್ಲದೇ ಸುಖ ಬಂದೀತು ಹೇಗೆ ? ಕಷ್ಟ ಏನೂ ಅಂತ ಗೊತ್ತಾದರೆ ತಾನೆ ಸುಖದ ಮಹತ್ವ ತಿಳಿಯೋದು. ಅಂದರೆ ಕಷ್ಟ–ನಷ್ಟಗಳು ಮನುಷ್ಯನಿಗೆ ಬರುವುದು ಸ್ವಾಭಾವಿಕ. ಕಷ್ಟಗಳು ಬಂದಾಗ ಬಹಳಷ್ಟು ಜನರು ಕೊರಗುವವರೇ ಹೆಚ್ಚು. ಕೊರಗಿದರೆ ಮನಃಶಕ್ತಿ ಕ್ಷೀಣಿಸುತ್ತದೆ ಸಹಿಸಿದರೆ ಪರಿಹಾರದ ಚಿಂತನೆ ಅಕ್ಷಯವಾಗುತ್ತದೆ. ಕಷ್ಟಗಳು ಎದುರಾದಾಗ ದಿಗ್ಭ್ರಾಂತರಾಗದೇ ದೇವರನ್ನೂ ದೂಷಿಸದೇ ಪರಿಹಾರಕ್ಕಾಗಿ ಪ್ರಯತ್ನಿಸಬೇಕು. ಏಕೆಂದರೆ ದೇವರು ನಮಗೆ ಬುದ್ಧಿಶಕ್ತಿ, ಬದ್ಧ ಯುಕ್ತಿಗಳನ್ನು ಕೊಟ್ಟಿಲ್ಲವೇ? ಮೇಲಿಂದ ಮೇಲೆ ಬರುವ ಕಷ್ಟಗಳು ಒಂದು ರೀತಿಯಲ್ಲಿ ನಮ್ಮ ಚಿಂತನೆಯನ್ನು ವಿಸ್ತರಿಸುತ್ತವೆ. ಬಂದ ಕಷ್ಟಗಳನ್ನು ನೆನೆದು ಜಗತ್ತಿನಲ್ಲಿ ನನ್ನಷ್ಟು ಕಷ್ಟ ಯಾರಿಗೂ ಇಲ್ಲವೆಂದು ಭಾವಿಸಿಕೊಳ್ಳುವುದಕ್ಕಿಂತ ಒಳಗಣ್ಣಿನಿಂದ ಆಚೆ–ಈಚೆ ನೋಡಿದಾಗ ನಮಗಿಂತಲೂ ನೂರಾರು ಕಷ್ಟಗಳಿಗೆ ಗುರಿಯಾಗಿರುವವರೂ ಕಾಣುತ್ತಾರೆ.

ಒಮ್ಮೆ ಕೃಷ್ಣಪರಮಾತ್ಮ ಕುಂತಿದೇವಿಗೆ ನಿನಗೇನು ವರ ಬೇಕು ಎಂದು ಕೇಳಿದನಂತೆ. ಆಗ ಕುಂತಿದೇವಿ ಸದಾಕಾಲ ಕಷ್ಟಗಳನ್ನು ಕೊಡು ಎಂದಳಂತೆ. ಇಡೀ ಜೀವನದಲ್ಲಿ ಪಟ್ಟ ಕಷ್ಟಗಳು ಸಾಲವೆ? ಅದೇಕೆ ಈ ವರ ಬೇಡುತ್ತಿ? ಎಂದು ಕೃಷ್ಣ ಪ್ರಶ್ನಿಸಿದಾಗ ಕುಂತಿ ಹೇಳಿದಳಂತೆ; ಪರಮಾತ್ಮ ಕಷ್ಟಗಳು ನಿನ್ನನ್ನು ನೆನಪಿಗೆ ತರುವಂತೆ ಸುಖಗಳು ತರಲಾರವು. ನಿನ್ನ ನಾಮಸ್ಮರಣೆಯ ಸ್ವರ್ಗ ಸುಖಕ್ಕಿಂತ ಬೇರೆ ಸುಖ ಇನ್ನೇನಿದೆ ಎಂದಳಂತೆ. ಅದೇ ರೀತಿ ಬಸವಣ್ಣನವರು ;

*ನಾಳೆ ಬಪ್ಪದು ನಮಗಿಂದೇ ಬರಲಿ*
*ಇಂದು ಬಪ್ಪದು ನಮಗೀಗಲೇ ಬರಲಿ*
*ಇದಕ್ಕಾರಂಜುವರು ಇದಕ್ಕಾರಳುಕುವರು ?*
*ಜಾತಸ್ಯ ಮರಣಂ ಧ್ರುವಂ ಎಂಬುದಾಗಿ*
*ನಮ್ಮ ಕೂಡಲಸಂಗಮದೇವರು ಬರೆದ ಬರೆಹವ*
*ತಪ್ಪಿಸುವಡೆ ಹರಿಬ್ರಹ್ಮಾದಿಗಳಿಗಳವಲ್ಲ*

ಎಂದಂತೆ ಕಷ್ಟ–ಸುಖ ಎಂಬಿವು ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಒಂದರ ನಂತರ ಒಂದು ಬಂದೇ ಬರುತ್ತವೆ. ರಾತ್ರಿ ನಂತರ ಹಗಲು ಹಗಲಿನ ನಂತರ ರಾತ್ರಿ ಬಂದಂತೆ. ಒಮ್ಮೆ ಯುದ್ಧದಲ್ಲಿ ಎದುರಾಳಿಯು ಬಿಟ್ಟ ಬಾಣದಿಂದ 'ಮೂಳೆ ಮುರಿದು ಮಾಂಸ ಹೊರಬಂದರೂ ಮುನ್ನುಗ್ಗುವೆ ತಲೆ ಕತ್ತರಿಸಿ ನೆಲಕ್ಕೆ ಬಿದ್ದರೂ ನನ್ನ ನಾಲಗೆಯಲ್ಲಿ ಶಿವನಾಮ ಜಪಿಸುವೆ' ಎನ್ನುವ ವೀರಯೋಧನ ಕ್ಲಿಷ್ಟ ಸಂದರ್ಭದಲ್ಲೂ ಅವನ ಮಾತಿನಲ್ಲಿ ಎಷ್ಟೊಂದು ಆತ್ಮವಿಶ್ವಾಸವಿದೆ. ಅದರಲ್ಲಿ ಕಿಂಚಿತ್ತಾದರೂ ನಮಗೆ ಮೂಡಿದರಷ್ಟೇ ಸಾಕು. ಹಾಗಾಗಿ ಭಗವಂತನಲ್ಲಿ ನಾವು ಬರೀ ಸುಖಗಳನ್ನು ಕೇಳಿದರೆ ಹೇಗೆ? ಕಷ್ಟಗಳನ್ನೂ ಕೊಡು ಅವುಗಳನ್ನು ಗೆಲ್ಲುವ ಅಂತಃಶಕ್ತಿಯನ್ನೂ ದಯಪಾಲಿಸು ಎಂದು ಬೇಡಬೇಕು. ಕಷ್ಟಗಳನ್ನು ಮುಖ್ಯವಾಗಿ ನಮಗೆ ಬೇಕಾಗಿರುವುದು ದಿಟ್ಟವಾದ ನಮ್ಮತನ. ಅದು ಹೊರಗಣ ಆವೇಶದಲ್ಲಿ ಇಲ್ಲ ಒಳಗಣ ಪ್ರಕಾಶದಲ್ಲಿದೆ. ಒಳಗೆ ಗೆಲ್ಲುತ್ತೇನೆಂಬ ದೃಢ ನಿಶ್ಚಯವಿದ್ದರೆ ಹೊರಗೆ ಸೋಲುವೆನೆಂಬ ಭಯವಿರುವುದಿಲ್ಲ. ಒಂದು ಸುಂದರಮೂರ್ತಿ ಪೂಜೆಗೊಳಗಾಗಬೇಕಾದರೆ ಅದಕ್ಕೆ ನೂರಾರು ಉಳಿಪೆಟ್ಟುಗಳು ಬೀಳುವುದು ಅನಿವಾರ್ಯ. ಹಾಗೆಯೇ ನಾವು ಕಷ್ಟಗಳೆಂಬ ಬೆಟ್ಟವನ್ನು ಮೆಟ್ಟಿ ನಿಂತಾಗ ಅದರ ತುಟ್ಟ ತುದಿಯಲ್ಲಿ ನಿರಾಳವಾಗಿ ಉಸಿರಾಡಲು ಸಾಧ್ಯ.

ನಾವು ಎತ್ತರೆತ್ತರಕ್ಕೆ ಬೆಳೆಯಲು ಕೆಲವು ಸಲ ನೋವುಗಳನ್ನು ಅನುಭವಿಸಬೇಕು. ನಮ್ಮನ್ನು ಅರಿಯಲು ಸೋಲುಗಳನ್ನು ಒಪ್ಪಿಕೊಳ್ಳಬೇಕು. ಗಳಿಸುವಾಗ ಅನುಭವವಾದಂತೆ, ನೋವಿನಲ್ಲಿ ಕಲಿತ ಪಾಠ ಜೀವನದಲ್ಲಿ ಮರೆಯಲು

* ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ನೀರಿನ ಟ್ಯಾಂಕ್ ಎದುರು, ಜನವಾಡ ರಸ್ತೆ, ಬೀದರ –೫೮೫ ೪೦೧.

ಸಾಧ್ಯವಿಲ್ಲ. ಬೆನ್ನಟ್ಟಿ ಬರುವ ನೋವು, ಅವಮಾನ, ಸಂಕಟ, ದುಃಖದಿಂದಲೂ ಸಹ ನಾವು ಒಂದೊಂದು ಪಾಠ ಕಲಿಯುತ್ತಾ ಹೋಗಬೇಕು. ಸರೋವರದ ಮೇಲೆ ಬಾತುಕೋಳಿ ಶಾಂತವಾಗಿ ಚಲಿಸುವಂತೆ ಕಂಡುಬಂದರೂ ಅದು ನೀರೊಳಗೆ ಬಹಳ ಪ್ರಯಾಸಪಟ್ಟು ಕಾಲುಗಳನ್ನು ಬಡಿಯುತ್ತಿರುತ್ತದೆ. ಹಾಗೆಯೇ ಬೆಳೆದು ನಿಂತ ಸಂಸ್ಥೆ ಅಥವಾ ಸಾಧಿಸಿದ ವ್ಯಕ್ತಿಯ ಬೆನ್ನ ಹಿಂದೆ ನೂರಾರು ಕಷ್ಟಗಳ ಅನುಭವ ಇರುತ್ತದೆ. ಯಶಸ್ಸೆಂಬುದು ಯಾರಿಗೂ ಸುಲಭವಾಗಿ ಕೈಗೆಟುಕುವ ವಸ್ತುವಲ್ಲ. ಅಲ್ಲದೆ ಸುಖದಿಂದ ಇರುವವರೆಲ್ಲರೂ ಕಷ್ಟಗಳನ್ನು ಅನುಭವಿಸಿಯೇ ಮೇಲಕ್ಕೆ ಬಂದಿರುತ್ತಾರೆ. ಈ ಸಂದರ್ಭದಲ್ಲಿ ಅಕ್ಕನ ವಚನ ನೆನಪಾಗುತ್ತದೆ.

*ಮನೆ ಮನೆಗೆ ಹೋಗಿಬಿಡುವಂತೆ ಮಾಡಯ್ಯ*
*ಬೇಡಿದರೆ ಇಕ್ಕದಂತೆ ಮಾಡಯ್ಯ*
*ಇಕ್ಕಿದರೆ ಕೆಳಕ್ಕೆ ಬೀಳುವಂತೆ ಮಾಡಯ್ಯ*
*ಬಿದ್ದುದ ನಾನೆತ್ತಿಕೊಳ್ಳುವುದಕ್ಕೂ ಮುನ್ನ*
*ಶುನಕವೊಂದು ಎತ್ತಿಕೊಂಡು ಹೋಗುವಂತೆ ಮಾಡಯ್ಯ*

ಅಂದರೆ ಅಕ್ಕಮಹಾದೇವಿಯು ಚೆನ್ನಮಲ್ಲಿಕಾರ್ಜುನನಲ್ಲಿ ಕಷ್ಟಗಳನ್ನೇ ಬೇಡುತ್ತಾಳೆ. ಇವುಗಳನ್ನು ನಾನು ಜಯಿಸಬಲ್ಲೆ ಎಂಬ ಆತ್ಮವಿಶ್ವಾಸ ಆಕೆಯಲ್ಲಿ ಕಾಣುತ್ತೇವೆ. ಕಠಿಣ ಸವಾಲುಗಳು ಎದುರಾದರೆ ಅದು ನಮ್ಮ ಶಕ್ತಿಯನ್ನು ಪರೀಕ್ಷಿಸಲು ಬಂದಿದೆಯೆಂದು ಭಾವಿಸಿಕೊಳ್ಳಬೇಕು. ಯಾವ ಕಷ್ಟಗಳೂ ಮನುಷ್ಯ ಪ್ರಯತ್ನಕ್ಕಿಂತ ದೊಡ್ಡದೇನಲ್ಲ. ಪ್ರತಿಯೊಬ್ಬರಿಗೂ ಅವರವರ ಸಾಮರ್ಥ್ಯಕ್ಕೆ ತಕ್ಕುದಾದ ಕಷ್ಟಗಳು ಬರುತ್ತವೆ. ಕಷ್ಟಗಳು ನಮ್ಮನ್ನು ಅಶಕ್ತರನ್ನಾಗಿ ಮಾಡಲು ಬಿಡದೇ ಸರಿಯಾದ ಆಲೋಚನೆಯಲ್ಲಿ ನಿಭಾಯಿಸಿದರೆ ನಾವು ಇನ್ನಷ್ಟು ಬಲಿಷ್ಠರಾಗುತ್ತೇವೆ.

ಒಟ್ಟಾರೆ ಕಷ್ಟಗಳಿಗೆ ಪಲಾಯನವಾದಿಯಾಗದೇ ಸ್ನೇಹಿತರಂತೆ ಹೊಂದಿಕೊಳ್ಳಬೇಕು. ಬಂಧುಗಳಂತೆ ಗೌರವಿಸಬೇಕು ಮತ್ತು ಹೆಂಡತಿಯಂತೆ ಅಪ್ಪಿಕೊಳ್ಳಬೇಕು. ನಕಾರಾತ್ಮಕವಾಗಿ ಯೋಚಿಸಿದರೆ ಪ್ರತಿ ಅವಕಾಶದಲ್ಲೂ ಕಷ್ಟವೇ ಎದುರಾಗುತ್ತದೆ. ಸಕಾರಾತ್ಮಕವಾಗಿ ಯೋಚಿಸಿದರೆ ಪ್ರತಿ ಕಷ್ಟವೂ ಅವಕಾಶವಾಗಿ ಪರಿಣಮಿಸುತ್ತದೆ. ✪

ಓಂ ಶ್ರೀ ಗುರುಬಸವಲಿಂಗಾಯ ನಮಃ

### ವಿನಮ್ರ ಮನವಿ

ಶ್ರೀಮಠದ ವಿಶಿಷ್ಟ ಯೋಜನೆಯಾಗಿ ರೂಪುಗೊಂಡ ಗ್ರಾಮಾಂತರ ಬಸವ ಜಯಂತಿ ಯೋಜನೆಯ ಪ್ರಮುಖ ಭಾಗವಾದ 'ಜಗಜ್ಯೋತಿ ಬಸವೇಶ್ವರ ನಾಟಕ' ದಲ್ಲಿ ೧೯೬೦ರಿಂದ ಭಾಗವಹಿಸುತ್ತ ಬಂದಿರುವ ಎಲ್ಲ ಕಲಾವಿದ ಬಂಧುಗಳಲ್ಲಿ ರಂಗನಿರ್ಮಾಣದಲ್ಲಿ ಸಹಕರಿಸಿದ ಸ್ನೇಹಿತದಲ್ಲಿ, ವಾದ್ಯವೃಂದದವರಲ್ಲಿ ಸವಿನಯ ವಿನಂತಿ.

ಇದೀಗ ನಾಟಕ ಒಂದು ಸಾವಿರ ಪ್ರದರ್ಶನದತ್ತ ಮುನ್ನಡೆಯುತ್ತಿದೆ. ಕಳೆದ ಐವತ್ತು ವರ್ಷಗಳಲ್ಲಿ ನಾಟಕದ ಪ್ರದರ್ಶನದಲ್ಲಿ ಭಾಗವಹಿಸಿ ಸೇವೆ ಸಲ್ಲಿಸುತ್ತ ಬಂದ ತಾವುಗಳು – ಪ್ರಕಟಲಾಶಿಸುತ್ತಿರುವ ಸಂಸ್ಮರಣ ಗ್ರಂಥಕ್ಕಾಗಿ ತಾವು ವಹಿಸಿದ ಪಾತ್ರ, ವರ್ಷ, ಅನುಭವಗಳನ್ನು ಸಂಕ್ಷಿಪ್ತವಾಗಿ ಎರಡು ಪುಟಗಳಿಗೆ ಮೀರದಂತೆ ಬರೆದು ಕಳುಹಿಸಬೇಕಾಗಿ ಕೋರುತ್ತೇವೆ.

ಐವತ್ತು ವರ್ಷಗಳ ಸವಿನೆನಪಿಗಾಗಿ ಸಮಾರಂಭ ಆಯೋಜಿಸಲು ಪರಮಪೂಜ್ಯ ಶ್ರೀ ಶ್ರೀಗಳವರ ಅಪ್ಪಣೆಯಾಗಿರುತ್ತದೆ.

ಈ ವಿಳಾಸಕ್ಕೆ ಪತ್ರ ಬರೆಯಲು ಆಶಿಸುತ್ತೇವೆ.

ತಮ್ಮ ವಿಶ್ವಾಸಿಗಳು
ವಿದ್ವಾನ್ ಶ್ರೀ ಪಿ.ಎನ್. ಚಂದ್ರಶೇಖರಯ್ಯ
ವ್ಯವಸ್ಥಾಪಕರು
ಗ್ರಾಮಾಂತರ ಬಸವ ಜಯಂತಿ ಯೋಜನೆ
ಶ್ರೀ ಸಿದ್ಧಗಂಗಾಮಠ, ತುಮಕೂರು ಜಿಲ್ಲೆ.

### ಸಿದ್ಧಗಂಗಾ ಮಾಸಪತ್ರಿಕೆ ಚಂದಾದಾರರ ಗಮನಕ್ಕೆ

ಚಂದಾದಾರರ ಸರಿಯಾದ ವಿಳಾಸವಿಲ್ಲದೆ ಪತ್ರಿಕೆಗಳು ನಮ್ಮ ಕಾರ್ಯಾಲಯಕ್ಕೆ ಹಿಂದಕ್ಕೆ ಬರುತ್ತಿವೆ. ತಾವು ದಯವಿಟ್ಟು ವಿಳಾಸ ಬದಲಾವಣೆಯಾದಲ್ಲಿ ಚಂದಾದಾರರ ಸಂಖ್ಯೆ ಹಾಗೂ ಅಂಚೆ ಪಿನ್‌ಕೋಡ್ ಇರುವ ಸರಿಯಾದ ವಿಳಾಸದ ಜೊತೆಗೆ ಮೊಬೈಲ್ ಫೋನ್‌ಸಂಖ್ಯೆ ಸಹ ಪತ್ರಿಕೆ ಕಾರ್ಯಾಲಯಕ್ಕೆ ತಿಳಿಸಲು ಕೋರಲಾಗಿದೆ.

–ಪ್ರಕಾಶಕರು





## ಅನಂತವಾಗಿರುವ ಅನಂತಬೇರು

## *Hemidesmus indicus, R.Br. Asclepiadaceae*

–ಡಾ|| ಶೈಲೇಶ್ ಎಂ.ಡಿ.*

ಸಾಮಾನ್ಯವಾಗಿ ನಮ್ಮ ಸುತ್ತಮುತ್ತಲಿನ ಗುಡ್ಡಗಾಡುಗಳಲ್ಲಿ ಕಾಣಸಿಗುವ ಅನಂತಬೇರು ಎಲ್ಲರಿಗೂ ಪರಿಚಿತ ದ್ರವ್ಯ. ಅನಂತಮೂಲವು ಕೆಂಪುಮಣ್ಣು ಇರುವ ಭೂಮಿಯಲ್ಲಿ, ಎಂದರೆ ಬೆಟ್ಟದ ಪ್ರದೇಶದಲ್ಲಿ ಹೆಚ್ಚಾಗಿ ಬೆಳೆಯುತ್ತದೆ. ಅನಂತ ಬೇರಿನಿಂದ ಅನೇಕ ತರಹದ ಔಷಧಿಗಳಾದ ಸರ್‌ಸಪರಿಲ್ಲಾ ಮುಂತಾದ ಔಷಧಿಯನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ. ಆದರೆ ಅನಂತ ಬೇರಿನ ಗುಣಧರ್ಮ, ಉಪಯೋಗದ ಬಗ್ಗೆ ತಿಳಿದುಕೊಳ್ಳುವ ಕುತೂಹಲ, ಸಹನೆಯಾಗಲಿ ನಮ್ಮ ಜನರಿಗೆ ಇಲ್ಲದೆ ಇರುವುದು ವಿಪರ್ಯಾಸ. ಈ ದ್ರವ್ಯವನ್ನು ಚರ್ಮವ್ಯಾಧಿಗಳಿಗೆ ಹೆಚ್ಚಾಗಿ ಬಳಸುತ್ತಾರೆ. ಯಾಕೆಂದರೆ ಇದು ಚರ್ಮದಲ್ಲಿ ಉತ್ಪತ್ತಿಯಾಗಿರುವ ಅನೇಕ ತರಹದ ದೋಷಗಳನ್ನು ಹೊರಹಾಕುತ್ತದೆ. ಯುನಾನಿ ವೈದ್ಯರು ಈ ದ್ರವ್ಯವನ್ನು ಬೇಧಿಕಾರಕ, ಜ್ವರನಾಶಕ, ಅರ್ಧ ತಲೆನೋವು, ಗಂಟುನೋವುಗಳಿಗೆ ಪರಿಣಾಮಕಾರಿಯೆಂದು ಹೇಳುತ್ತಾರೆ. ಕೊತ್ತಂಬರಿ, ಜೀರಿಗೆ ಮತ್ತು ಅನಂತಬೇರಿನ ಪುಡಿಯನ್ನು ಸೇರಿಸಿ ತಯಾರಿಸಿದ ಕಷಾಯವನ್ನು ಸೇವಿಸುವುದನ್ನು ನಾವು ಈಗಲೂ ಹಳ್ಳಿ, ಪಟ್ಟಣಗಳಲ್ಲಿ ಕಾಣಬಹುದು.

**ಬಹು ಭಾಷಾ ಹೆಸರುಗಳು :**

| | | |
|---|---|---|
| ಕನ್ನಡ | : | ಅನಂತಬೇರು, ನಾಮದಬೇರು |
| ಸಂಸ್ಕೃತ | : | ಅನಂತಮೂಲ, ಸಾರಿವಾ |
| ತುಳು | : | ನಾಮದ ಬೇರ್ |
| ಹಿಂದಿ | : | ಸರಿವನ |
| ಇಂಗ್ಲಿಷ್ | : | ಇಂಡಿಯನ್ ಸರ್ಸಪರಿಲ್ಲ |

**ಪರ್ಯಾಯ ಪದಗಳು :**

ಸಾರಿವಾ, ಶ್ವೇತಸಾರಿವಾ, ಗೋಪಿಸಾರಿವಾ, ಗೋಪ, ಗೋಪವಲ್ಲೀ, ಕೃಷ್ಣೋದರೀ, ಶ್ಯಾಮಾ, ಚಂದನಗಂಧಾ, ಗೋಪಕನ್ಯಾ, ಅನಂತಾ, ಅನಂತಮೂಲ, ಉತ್ಪಲ ಸಾರಿವಾ, ಚಂದನಾ, ಗೋಪವಧೂ, ಜಂಬೂಪತ್ರಾ.

**ದ್ರವ್ಯದ ವರ್ಣನೆ :**

ಹಳ್ಳಿಯ ಜನರಿಗೆ ಪರಿಚಯವಿರುವ ಅನಂತ ಮೂಲವು ಒಂದು ಬೆಳ್ಳನೆಯ ಕುರುಚುಲು ಬಳ್ಳಿ. ಇದರ ಎಲೆಯು ಒಂದು ಸೆಂ.ಮೀ. ನಷ್ಟು ಉದ್ದವಾಗಿ ಬೆಳೆಯುತ್ತದೆ. ಎಲೆಯು ಹಸಿರಾಗಿದ್ದೂ, ಮಧ್ಯೆ ಬಿಳಿಬಣ್ಣದ ನಾಮವಿರುವುದು. ಆದ್ದರಿಂದಲೇ ಈ ಬಳ್ಳಿಯನ್ನು 'ನಾಮದ ಬಳ್ಳಿ' ಎಂಬ ಹೆಸರಿನಿಂದ ಕರೆಯುತ್ತಾರೆ. ಈ ದ್ರವ್ಯದ ಬೇರು ಬಹಳ ಸುಗಂಧತೆಯಿಂದ ಕೂಡಿದೆ. ಆದ್ದರಿಂದ 'ಸುಗಂಧಿಬೇರು' ಎಂಬುದಾಗಿಯೂ ಕರೆಯುತ್ತಾರೆ. ಬೇರನ್ನು ತುಂಡರಿಸಿದಾಗ ಪರಿಮಳವುಳ್ಳ ಹಾಲು ಸೋರುತ್ತದೆ. ಬೇರುಗಳು ಭೂಮಿಯಲ್ಲಿ ಆಳವಾಗಿ ಇಳಿದಿರುತ್ತದೆ. ಈ ದ್ರವ್ಯದ ಬೇರನ್ನು ಮುಖ್ಯವಾಗಿ ರಕ್ತಪಿತ್ತ, ವಾತರಕ್ತ, ಸೆರಗು, ಕೆಮ್ಮು, ಉಬ್ಬಸ, ಅರುಚಿ, ಜ್ವರ ಹೀಗೆ ಅನೇಕ ರೋಗಗಳಿಗೆ ಉಪಯೋಗಿಸುತ್ತಾರೆ. ಭಾರತದ ಎಲ್ಲ ಪ್ರಾಂತ್ಯಗಳಲ್ಲಿ ಬೆಳೆಯುವ ಈ ಮೂಲಿಕೆ ಶ್ರೀಲಂಕಾ, ಮಲಯಾ, ಬರ್ಮಾ ದೇಶದಲ್ಲಿ ಹೆಚ್ಚಾಗಿ ಬೆಳೆಯುತ್ತದೆ.

**ವಿಧಗಳು :**

ಗೋಪಾ, ಗೋಪವಲ್ಲೀ, ಉತ್ಪಲಸಾರಿವಾ ಹೀಗೆ ಅನೇಕ ಬಗೆಗಳು ಈ ದ್ರವ್ಯದಲ್ಲಿ ಕಂಡು ಬಂದರೂ, ಆಧುನಿಕ ಆಚಾರ್ಯರು ಇದನ್ನು ಮುಖ್ಯವಾಗಿ ೨ ವಿಧವಾಗಿ ವಿಂಗಡಿಸಿದ್ದಾರೆ. ಅವು

೧. ಬಿಳಿ ಅನಂತಬೇರು (Hemidesmus indicus)
೨. ಕಪ್ಪು ಅನಂತಬೇರು (Ichnocarpus frutescence)

ಮಾರುಕಟ್ಟೆಯಲ್ಲಿ Decalepis hamiltonii ಎಂಬ

* ಆಳ್ವಾಸ್ ಆಯುರ್ವೇದಿಕ್ ಮೆಡಿಕಲ್ ಕಾಲೇಜು, ಮೂಡಬಿದರೆ, ಮಂಗಳೂರು.

ಸಮಾಜದಲ್ಲಿ ಸಮಾನತೆ, ಸ್ವಯಂ ಪೂರ್ಣತೆ, ಶ್ರಮ ಗೌರವ ಗುಣಗೌರವಗಳನ್ನು ಸ್ಥಾಪಿಸಿದಂತೆ ಸಿದ್ಧಾಂತದಲ್ಲಿ ಸಮನ್ವಯವನ್ನು ಸಾಧಿಸಿದರು ಶರಣರು. -ಡಾ. ಸಿದ್ಧಯ್ಯ ಪುರಾಣಿಕರು.

ವಿಧವನ್ನು ಅನಂತಮೂಲವಾಗಿ ಮಾರಾಟ ಮಾಡುತ್ತಾರೆ.

**ಉಪಯುಕ್ತ ಅಂಗಗಳು :** ಬೇರು

**ದ್ರವ್ಯದ ಗುಣಧರ್ಮಗಳು :**

ರಸ : ಮಧುರ, ತಿಕ್ತ
ಗುಣ : ಗುರು, ಸ್ನಿಗ್ಧ
ವೀರ್ಯ : ಶೀತ
ವಿಪಾಕ : ಮಧುರ
ಕರ್ಮ : ತ್ರಿದೋಷಹರ, ಗ್ರಾಹೀ, ದೀಪನ, ವಿಷಘ್ನ, ಶುಕ್ರಲ

***ಸಾರಿವಾಯುಗಲಂ ಸ್ವಾದು ಸ್ನಿಗ್ಧಂ ಶುಕ್ರಕರಂ ಗುರು ।
ಅಗ್ನಿಮಾಂಧ್ಯಾರುಚಿ ಶ್ವಾಸಕಾಸಾಮವಿಷನಾಶನಮ್ ॥
ದೋಷತ್ರಯಾಸ್ರಪ್ರದರ ಜ್ವರಾತಿಸಾರನಾಶನಮ್***
(ಭಾವಪ್ರಕಾಶ)

ಎಂದರೆ ಅನಂತಬೇರು ಸ್ವಾಧುರಸದಿಂದ ಮತ್ತು ವಿಪಾಕದಿಂದ ಕೂಡಿದೆ. ಸ್ನಿಗ್ಧ ಮತ್ತು ಗುರುಗುಣದಿಂದ ಕೂಡಿದೆ. ಶುಕ್ರಕರವಾಗಿದೆ. ತ್ರಿದೋಷಹರವಾಗಿದೆ. ಅಗ್ನಿಮಾಂದ್ಯ, ರುಚಿಯಿಲ್ಲದಿರುವಿಕೆ, ಶ್ವಾಸ, ಕೆಮ್ಮು, ಆಮಜವಿಕಾರ, ವಿಷರೋಗ, ಪ್ರದರ, ಜ್ವರ, ಅತಿಸಾರ ಮುಂತಾದ ರೋಗವನ್ನು ನಿವಾರಿಸುತ್ತದೆ.

**ಔಷಧಿ ಪ್ರಮಾಣ :**

ಲೇಪ : ೫-೧೦ ಗ್ರಾಂ
ಚೂರ್ಣ : ೩-೫ ಗ್ರಾಂ
ಅಸವ : ೫೦ ಮಿ.ಲೀ.
ಪಾನಕ : ೧೦-೫೦ ಮಿ.ಲೀ.

**ಔಷಧೀಯ ಯೋಗಗಳು :**

* ಪಿಂಡ ತೈಲ * ಸಾರಿವಾದ್ಯಾಸವ * ಮಹಾತಿಕ್ತಕಘೃತ
* ಪಿಪ್ಪಲ್ಯಾದಿ ಘೃತ

**ಔಷಧೀಯ ಉಪಯೋಗಗಳು :**

* ಅನಂತಬೇರನ್ನು ಗಾಯ ಶುಚಿಮಾಡಲು ಉಪಯೋಗಿಸಬಹುದು.
* ಅನಂತಬೇರು, ಅಮೃತಬಳ್ಳಿ, ಹುರಿದ ಜೀರಿಗೆ ಮತ್ತು ಮಂಜಿಷ್ಠ ಸೇರಿಸಿ ಕಷಾಯ ಮಾಡಿ ಸೇವಿಸುವುದರಿಂದ ಮೂತ್ರದಲ್ಲಿ ಉರಿ ಮತ್ತು ನೋವು ಕಡಿಮೆಯಾಗುತ್ತದೆ.
* ಅನಂತಬೇರು, ಭದ್ರಮುಷ್ಠಿ, ಪಡವಳಕಾಯಿ, ಅಗಲ ಶುಂಠಿಯ ಕಷಾಯವನ್ನು ಮಾಡಿ ಕುಡಿಯುವುದರಿಂದ ವಿಷಮುಜ್ವರವು ನಿವಾರಣೆಯಾಗುತ್ತದೆ.
* ಅನಂತಬೇರಿನಿಂದ ತಯಾರಿಸಿದ ಲೇಪವನ್ನು ಬಾಹ್ಯ ತ್ವಚೆಗೆ ಲೇಪಿಸುವುದರಿಂದ ಮತ್ತು ಅದರ ಕಷಾಯವನ್ನು ಕುಡಿಯುವುದರಿಂದ ಕುಷ್ಠರೋಗವು ನಾಶವಾಗುತ್ತದೆ.
* ಎರಡರಷ್ಟು ಪ್ರಮಾಣದ ಅನಂತ ಬೇರಿನ ಕಷಾಯಕ್ಕೆ ಒಂದು ಪ್ರಮಾಣ ತುಪ್ಪ ಬೆರಸಿ ಕಾಯಿಸಿ ಸೇವಿಸುವುದರಿಂದ ಉಬ್ಬಸ ರೋಗವು ನಿವಾರಣೆಯಾಗುತ್ತದೆ.
* ಅನಂತಬೇರಿನ ಚೂರ್ಣ ಅಥವಾ ಲೇಪವನ್ನು ಜೇನುತುಪ್ಪದಲ್ಲಿ ಸೇವನೆ ಮಾಡಿದರೆ ಜೇಡರ ವಿಷಕ್ಕೆ ಒಳ್ಳೆಯದು.
* ಅನಂತಬೇರಿನ ಚೂರ್ಣವನ್ನು ಜೇನುತುಪ್ಪದೊಡನೆ ಸೇವಿಸಿದರೆ ಸಂಧಿವಾತವು ಗುಣವಾಗುತ್ತದೆ.
* ಅನಂತಬೇರಿನ ಚೂರ್ಣಕ್ಕೆ ತಾವರೆದಂಟು ಸೇರಿಸಿ ಕಷಾಯ ಮಾಡಿ ಅದಕ್ಕೆ ಸಕ್ಕರೆ ಬೆರೆಸಿ ಕುಡಿದರೆ, ಪಿತ್ತದಿಂದ ಬಂದ ಜ್ವರ ಮತ್ತು ವಾಂತಿ ನಿಲ್ಲುತ್ತದೆ.
* ಅನಂತಬೇರಿನ ತೊಗಟೆಗೆ ೧೧ ಒಳ್ಳೆ ಮೆಣಸಿನಕಾಳು ಸೇರಿಸಿ ನೀರಿನ ಸಹಾಯದಿಂದ ಅರೆದು ಪ್ರತಿದಿನ ಬೆಳಿಗ್ಗೆ ೭ ದಿವಸ ಸೇವಿಸುವುದರಿಂದ ಕಣ್ಣಿನ ಮತ್ತು ಶರೀರದ ಹಳದಿ ಬಣ್ಣ ದೂರವಾಗಿ, ಕಾಮಾಲೆ ರೋಗವು ನಿವಾರಣೆ.
* ಸಿಪ್ಪೆ ತೆಗೆದ ಅನಂತ ಬೇರನ್ನು ಹಾಲಿನಲ್ಲಿ ಅರೆದು, ಬೆಳಿಗ್ಗೆ ಒಂದು ವಾರದವರೆಗೆ ಸೇವನೆ ಮಾಡುವುದರಿಂದ ಎದೆಹಾಲು ವೃದ್ಧಿಯಾಗುತ್ತದೆ.
* ರಕ್ತಶುದ್ಧಿಗೊಳ್ಳಲು ಅನಂತಬೇರಿನ ಕಷಾಯವನ್ನು ದಿನಾಲೂ ಬೆಳಿಗ್ಗೆ ಸೇವಿಸಬೇಕು.
* ಒಂದು ಚಮಚ ಅನಂತಬೇರಿನ ಚೂರ್ಣ ಮತ್ತು ಸಕ್ಕರೆ ಚೂರ್ಣವನ್ನು ೧೦೦ ಮಿ.ಲೀ. ಹಾಲಿಗೆ ಬೆರೆಸಿ, ಅದಕ್ಕೆ ೫೦ ಮಿ.ಲೀ. ನೀರು ಸೇರಿಸಿ, ಕುದಿಸಿ ಹಾಲಿನ ಭಾಗದಷ್ಟು ಉಳಿಯುವಾಗ ಕೆಳಗಿಳಿಸಿ ತಣ್ಣಗಾದ ನಂತರ ಸೇವನೆ ಮಾಡುವುದರಿಂದ ಬಿಳಿಸೆರಗು, ನರಗಳ ದೌರ್ಬಲ್ಯ, ವಾತರೋಗಗಳು ನಿವಾರಣೆ. ☆

ಹರಪೂಜೆ ಗುರುಸೇವೆ ಪರಪುಣ್ಯವಿಲ್ಲದೆ ಬರಿದೆ ಸುಖಭೋಗವು ದೊರಕುವುದುಂಟೆ ಆತ್ಮಾ
-ಬಾಲಲೀಲಾ ಮಹಾಶಿವಯೋಗಿ







# ತೀವ್ರರೋಗಗಳಲ್ಲಿ ನಿಸರ್ಗೋಪಚಾರ
## ಪಿತ್ತದ ಗಂಧೆಗಳು

-ಜಿ.ವಿ. ವೆಂಕಟನಾರಾಯಣ ಶಾಸ್ತ್ರಿ *

### ಪಿತ್ತದ ಗಂಧೆ

**ಲಕ್ಷಣಗಳು :**

ಒಮ್ಮೆಗೇ ಮೈಮೇಲೆ ದದ್ದುಗಳೆದ್ದಲ್ಲಿ ಅದನ್ನು ಪಿತ್ತದ ಗಂದೆಗಳೆನ್ನುವರು. ನಾಲ್ಕಾಣೆಯ ಅಗಲದಿಂದ ಹಿಡಿದು ರೂಪಾಯಿಯ ಅಗಲದವರೆಗೂ ದದ್ದುಗಳು ಏಳುವುವು. ಮೈಮೇಲೆ, ಮುಖದ ಮೇಲೆಲ್ಲಾ ಎದ್ದು ಮುಖವು ವಿಕಾರವಾಗಿ ಕಾಣುವಂತೆಯೂ ಮಾಡುವುವು.

**ಕಾರಣ :**

ಇದರ ಹೆಸರೇ ಸೂಚಿಸುವಂತೆ ಹೆಚ್ಚಿನ ಪಿತ್ತದಿಂದ (Bile) ಬಂದಿರುವ ಕಾಯಿಲೆ. ಪಿತ್ತಜನಕಾಂಗವು ಶರೀರದಲ್ಲಿ ಉತ್ಪತ್ತಿಯಾಗುವ ವಿಷಸಂಗ್ರಹವನ್ನು ತೆಗೆದುಹಾಕುವ ಕಾರ್ಖಾನೆ. ಅದಕ್ಕೆ ಹೊರೆ ಹೆಚ್ಚಿದರೆ ವಿಷವಸ್ತುವನ್ನು ರಕ್ತಕ್ಕೆ ಬಿಟ್ಟುಬಿಡುತ್ತದೆ. ಅದರ ಫಲವೇ ಈ ದದ್ದುಗಳು. ಕೆರೆದಷ್ಟೂ ಹೆಚ್ಚಿ ಮೈಮೇಲೆಲ್ಲಾ ಏಳುತ್ತದೆ.

**ನಿಸರ್ಗೋಪಚಾರ :**

ನೋಡುವುದಕ್ಕೆ ಭಯಂಕರವಾಗಿ ಕಂಡರೂ ಯಾವ ಗುರುತನ್ನೂ ಬಿಡದೆ ತನ್ನಷ್ಟಕ್ಕೆ ತಾನೇ ಬಂದ ದಾರಿಗೆ ಸುಂಕವಿಲ್ಲವೆಂದು ಹಿಂದಿರುವುವ ಕಾಯಿಲೆ. ಗಾಬರಿಬಿದ್ದರೆ ತಪ್ಪು ಅದರದಲ್ಲ.

1. ಮೊದಲು ಆಹಾರದ ಬದಲಾವಣೆ. ಎಲ್ಲಾ ರೀತಿಯ ಕಾಯಿಗಳು, ಕಡ್ಲೆಕಾಯಿ, ತೆಂಗಿನಕಾಯಿ, ಗೋಡಂಬಿ ಇತ್ಯಾದಿಗಳನ್ನು ಬಿಟ್ಟುಬಿಡಬೇಕು. ಕರಿದ ಪದಾರ್ಥಗಳು ವರ್ಜ್ಯವೆಂದು ಹೇಳಲೇಬೇಕಿಲ್ಲವಲ್ಲ. ಪರಿಷ್ಕೃತ ಆಹಾರವನ್ನೆಲ್ಲಾ ಬಿಡಬೇಕು. ಬಿಳಿಯ ಅಕ್ಕಿ, ಸಕ್ಕರೆ, ಬಿಳಿಯ ಬ್ರೆಡ್ ಇತ್ಯಾದಿ. ಆಹಾರದಲ್ಲಿ ಹಣ್ಣು, ತಾಜಾ ತರಕಾರಿಗಳ ಪ್ರಮಾಣವನ್ನು ಹೆಚ್ಚಿಸಬೇಕು. ಸ್ನಾನದ ನಂತರ ತಣ್ಣೀರಿನ ಪ್ರಚೋದಕ ಪಟ್ಟಿ. 5. ಹೆಚ್ಚು ನೀರು ಕುಡಿಯಬೇಕು. 6. ಮಣ್ಣಿನ ಜೊತೆ ದೊಡ್ಡಪತ್ರೆಯ ಸೊಪ್ಪಿನ ರಸವನ್ನು ಹಾಕಿ, ತಣ್ಣೀರಿನಲ್ಲಿ ಕಲೆಸಿ, ಮೈಗೆಲ್ಲಾ ಹಚ್ಚಿ, ಬಿಸಿಲಿನಲ್ಲಿ ಒಂದೆರೆಡು ಗಂಟೆ ಇದ್ದು ತಣ್ಣೀರಿನ ಸ್ನಾನ ಮಾಡಬೇಕು.

**ಕಾಮಾಲೆ :**

ಪಿತ್ತಕೋಶವು ಶರೀರದ ಒಂದು ದೊಡ್ಡ ರಾಸಾಯನಿಕ ಕಾರ್ಖಾನೆ. ಶರೀರದಲ್ಲಿ ಸತ್ತ ಕೆಂಪು ರಕ್ತಕಣಗಳಲ್ಲಿನ ಸ್ವಲ್ಪ ಭಾಗವನ್ನು ಮತ್ತೆ ಹೊಸ ರಕ್ತಕಣಗಳನ್ನಾಗಿ ಪರಿವರ್ತಿಸುತ್ತದೆ. ಇದು ಹಳದಿಯ ಬಣ್ಣದ ಕಹಿಯಾದ ಒಂದು ರಸ. ಇದರಲ್ಲಿ ಬಿಲಿರುಬಿನ್(Bilirubin) ಎಂಬ ಕೆಂಪುವರ್ಣ ದ್ರವ್ಯವೂ ಬಿಲಿವರ್ಡಿನ್ (Biliverdin) ಎಂಬ ಹಸಿರುವರ್ಣ ದ್ರವ್ಯವೂ ಇರುತ್ತದೆ. ಈ ರಸವು ಕೊಬ್ಬಿನ ಜೀರ್ಣಕ್ರಿಯೆಯಲ್ಲಿ ಭಾಗವಹಿಸುತ್ತದೆ. ಪಿತ್ತರಸವು ಪಿತ್ತ ಲವಣಗಳು (Bile salts) ವರ್ಣದ್ರವ್ಯಗಳು (Pigments), ಕೊಲೆಸ್ಟ್ರಾಲ್ ಮುಂತಾದ ರಾಸಾಯನಿಕಗಳಿಂದ ಒಡಗೂಡಿರುತ್ತದೆ. ರಕ್ತವು ಹೆಪ್ಪುಗಟ್ಟುವಾಗ ಅದರಲ್ಲಿ ಹುಟ್ಟುವ ಬಿಳಿಯ ದಾರದಂತಹ ಸಸಾರಜನಕ ಪದಾರ್ಥವನ್ನು, ತಂತುದ್ರವ್ಯ (Fibrinogen) ವನ್ನು ಉತ್ಪಾದಿಸುತ್ತದೆ. ಕಬ್ಬಿಣ ಮತ್ತು ರಕ್ತಕಣಗಳನ್ನು ಶೇಖರಿಸುತ್ತದೆ. ಪಿತ್ತಜನಕಾಂಗವು ಕರುಳಿನಲ್ಲಿ ಉತ್ಪತ್ತಿಯಾಗುವ ಮತ್ತು ರಕ್ತದಲ್ಲಿ ಸೇರಿರುವ ವಿಷಪದಾರ್ಥಗಳನ್ನು ಶುದ್ಧೀಕರಿಸುತ್ತದೆ. ಶರ್ಕರ ಪಿಷ್ಟಗಳನ್ನು ಗ್ಲೈಕೋಜಿನ್ ರೂಪದಲ್ಲಿ ಸಂಗ್ರಹಿಸುತ್ತದೆ. ಅದು ವಿಟಮಿನ್ 'ಎ', 'ಬಿ' ಮುಂತಾದುವುಗಳನ್ನು ತಯಾರಿಸುತ್ತದೆ. ಅದರ ಕಾರ್ಯಗಳನ್ನು ಪಟ್ಟಿ ಮಾಡುತ್ತಲೇ ಹೋಗಬಹುದು. ಕೆಲವೊಮ್ಮೆ ಕೆಲಸದ ಹೊರೆಯು ಹೆಚ್ಚಾಗಿ ತನ್ನ ವರ್ಣದ್ರವ್ಯಗಳನ್ನು ರಕ್ತಕ್ಕೆ ಸೇರಿಸಿಬಿಡಬಹುದು. ಆಗ ಮೊದಲು ಕಣ್ಣೂ, ನಂತರ ಶರೀರವೆಲ್ಲಾ ಹಳದಿಯ ಬಣ್ಣಕ್ಕೆ ತಿರುಗುಬಿಡುತ್ತದೆ. ಇದನ್ನು ಅರಿಶಿನ ಕಾಮಾಲೆ ಎನ್ನುವರು. ಇದು ಪಿತ್ತಜನಕಾಂಗ ತೊಂದರೆಯಲ್ಲಿದೆ, ಎಚ್ಚರಿಕೆ- ಎಂಬ ಸಂಕೇತ!.

* 'ನಿಸರ್ಗ ಯೋಗಧಾಮ' ನಂ. ೨/೨೦೫೯, ೧೧ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು -೫೭೨ ೧೦೨.

ಬಸವನ ನೆನೆಮನವೆ ಸಂಗನ ಬಸವನ ನೆನೆಮನವೆ. - ಮಹಾದೇವಿಯಕ್ಕ

**ಲಕ್ಷಣಗಳು :**

ನಿದ್ದೆಯಿಲ್ಲದಿರುವಿಕೆ, ಹಸಿವು ಇಂಗುವುದು, ಮಲವು ಬೂದು ಅಥವಾ ಬಿಳಿಯ ಬಣ್ಣದ್ದಾಗುವುದು, ಮೂತ್ರವು ಗಾಢವಾದ ಹಸಿರು-ಕಂದು ಬಣ್ಣದಿಂದ ಕೂಡಿರುವುದು, ಬಾಯಿ ಕಹಿಯಾಗುವುದು, ನಾಲಗೆಯ ಮೇಲೆ ಬಿಳಿಯ ಒತ್ತರ, ಆಹಾರವನ್ನು ಕಂಡರೆ ವಾಕರಿಕೆ, ವಾಂತಿ ಬರುವ ಅನಿಸಿಕೆ, ತುಂಬಾ ಸುಸ್ತು, ತಲೆನೋವು, ಜ್ವರ, ಮಲಬದ್ಧತೆ, ಯಕೃತ್ತಿನ ಜಾಗದಲ್ಲಿ ಸಣ್ಣನೋವು, ಮುಖ್ಯವಾಗಿ ಕಣ್ಣು, ಚರ್ಮ ಹಾಗೂ ಮೂತ್ರ ಹಳದಿಯ ಬಣ್ಣದ್ದಾಗುವುದು.

**ಕಾರಣ :**

ಪಿತ್ತಜನಕಾಂಗ ಎಂತಹ ತೊಂದರೆಯಲ್ಲಿಯೂ ಕೆಲಸ ಮಾಡುವ ಅಂಗ. ಅದರ ತಾಳ್ಮೆ ಅಪಾರ. ಆ ತಾಳ್ಮೆಯನ್ನು ಪರೀಕ್ಷಿಸುವುದು ನಮ್ಮ ನಾಲಿಗೆ, ಕರಿದ, ಹೆಚ್ಚು ಸಾಂಬಾರು ಪದಾರ್ಥಗಳು ಬೆರೆತ ಆಹಾರ ನಾಲಿಗೆಗೆ ಬೇಕು. ಜೊತೆಗೆ ಕಾಫಿ, ಟೀ, ಆಲ್ಕೋಹಾಲ್ ಇತ್ಯಾದಿ ಪಾನೀಯಗಳು. ಜೊತೆಗೆ ನಾಗರೀಕನ ಜಂಕ್ ಫುಡ್. ಇವೆಲ್ಲದರ ಜೊತೆಗೆ ಔಷಧಿಗಳು. ಕಡೆಯದಾಗಿ ವ್ಯಾಯಾಮರಹಿತ ಜೀವನ. ಇಂತಹ ಸನ್ನಿವೇಶದಲ್ಲಿ ಪಿತ್ತಕೋಶವು ಕೊಡುವ ಒಂದು ಸಣ್ಣ ಎಚ್ಚರಿಕೆ ಈ ಕಾಮಾಲೆ. ಪಿತ್ತಕೋಶಕ್ಕೆ ಹೊರೆ ಹೆಚ್ಚಾದಾಗ, ಕರುಳುಗಳಿಗೆ ಪಿತ್ತರಸ ಹಾಗೂ ವರ್ಣದ್ರವ್ಯಗಳನ್ನು ಕೊಂಡೊಯ್ಯುವ ಪಿತ್ತರಸನಾಳಗಳ ಕಾರ್ಯಕ್ಕೆ ತೊಂದರೆಯುಂಟಾದಾಗ ಅದು ಪಿತ್ತದ ರಸ ಮತ್ತು ವರ್ಣದ್ರವ್ಯವನ್ನು ರಕ್ತಕ್ಕೆ ಬಿಟ್ಟುಬಿಡುತ್ತದೆ. ಆಗ ಚರ್ಮದ ಬಣ್ಣ ಹಳದಿಯಾಗುತ್ತದೆ. ಪಿತ್ತಾಶ್ಮರಿ, ಮಲೇರಿಯಾ, ಹಳದಿಜ್ವರ, ಟೈಫಾಯ್ಡ್, ರಕ್ತಹೀನತೆ, ಪಿತ್ತಕೋಶದ ಉರಿಊತ, ಹೆಪಟೈಟಿಸ್ ಮುಂತಾದ ರೋಗಗಳು ಬಂದಾಗ ರಕ್ತಕಣಗಳ ಸಾವು ಹೆಚ್ಚುತ್ತದೆ. ಇದರಿಂದ ಪಿತ್ತಕೋಶಕ್ಕೆ ಹೊರೆ ಹೆಚ್ಚಿ ವರ್ಣದ್ರವ್ಯಗಳನ್ನು ರಕ್ತಕ್ಕೆ ಬಿಡುತ್ತದೆ. ಪಿತ್ತಕೋಶದ ಉರಿಊತ ಮತ್ತು ಹೆಪಟೈಟಿಸ್ ಬಿಟ್ಟು ಉಳಿದ ಕಾಯಿಲೆಗಳು ವಾಸಿಯಾದ ನಂತರ ಕಾಮಾಲೆಯೂ ವಾಸಿಯಾಗುತ್ತದೆ. ಈ ರೋಗಗಳಾವುವೂ ಇಲ್ಲದೆ ಬರೀ ಪಿತ್ತನಾಳದ ತಡೆಯಿಂದ ಉಂಟಾದ ಕಾಮಾಲೆಯನ್ನು ಮಾತ್ರ ಇಲ್ಲಿ ಹೇಳಲಾಗಿದೆ.

**ನಿಸರ್ಗೋಪಚಾರ :**

ಒಂದು ವಾರ ಬರೀ ಹಣ್ಣಿನ ರಸಗಳನ್ನು ಮಾತ್ರ ತೆಗೆದುಕೊಳ್ಳಬೇಕು. ನಿಂಬೆಹಣ್ಣೂ, ಜೇನುತುಪ್ಪ, ದ್ರಾಕ್ಷಿ, ಕಿತ್ತಳೆ, ಎಳನೀರು, ಮೂಸಂಬಿ, ದಾಳಿಂಬೆ, ಇತ್ಯಾದಿ ಹುಳಿ ಹಣ್ಣುಗಳ ರಸಗಳು, ಕಬ್ಬಿನ ಹಾಲು, ಬೆಣ್ಣೆ ತೆಗೆದ ಮಜ್ಜಿಗೆ, ಪ್ರತಿದಿನವೂ ಬಿಸಿನೀರಿನ ಎನಿಮಾ. ನಂತರ ಆಹಾರವನ್ನು ಕೆಳಗಿನ ಮಾದರಿಯಲ್ಲಿ ಬದಲಾಯಿಸಿಕೊಳ್ಳಬೇಕು. ಈ ಕಾಯಿಲೆ ಕೊಂಚ ಹೆಚ್ಚು ದಿನಗಳ ಕಾಲ ಉಳಿಯುವುದರಿಂದ ಹಾಗೂ ವಾಸಿಯಾದ ನಂತರವೂ ಪಿತ್ತಜನಕಾಂಗ ಪೂರ್ಣ ಶಕ್ತಿಯುತವಾಗಿರುವುದಿಲ್ಲದುದರಿಂದ ಅನೇಕ ತಿಂಗಳಕಾಲ ತಾಳ್ಮೆಯಿಂದ ಮುಂದುವರಿಸಬೇಕು.

**ಬೆಳಿಗ್ಗೆ :** ಒಂದು ಲೋಟ ಬಿಸಿನೀರು+ನಿಂಬೆಹಣ್ಣು+2 ಚಮಚ ಜೇನುತುಪ್ಪ. **ಬೆಳಗಿನ ತಿಂಡಿ :** ಎರಡು ಅಥವಾ ಮೂರು ವಿಧವಾದ ಹಣ್ಣುಗಳು. ಉದಾ: 1. ಬಾಳೆಹಣ್ಣು+ ಹುಳಿಯ ಹಣ್ಣುಗಳಲ್ಲಿ ಯಾವುದಾದರೊಂದು ಅಥವ ಎರಡು 2. ಪಪಾಯಿ + ಹುಳಿಯ ಹಣ್ಣುಗಳೆರಡು.

**11 ಗಂಟೆಗೆ :** 1 ಲೋಟ ಕಿತ್ತಲೆರಸ, ದ್ರಾಕ್ಷಿ/ಯಾವುದಾದರೊಂದು ಹುಳಿಯ ಹಣ್ಣಿನ ರಸ. **ಮಧ್ಯಾಹ್ನ :** ಎರಡು ಸೂಖಿ ಚಪಾತಿ + ಬೇಯಿಸಿದ ತರಕಾರಿಗಳು/ಸೂಪ್ಪುಗಳು ಸ್ವಲ್ಪ ಉಪ್ಪಿನೊಂದಿಗೆ (ತೆಂಗಿನಕಾಯಿ ಮತ್ತು ಒಗ್ಗರಣೆ ಬೇಡ) ಸ್ವಲ್ಪ ನಿಂಬೆಯ ರಸ ಹಾಕಬಹುದು.

**ಸಂಜೆ :** 1 ಲೋಟ ತರಕಾರಿಯ ರಸ+ಮಜ್ಜಿಗೆ, ನಿಂಬೆರಸ, ಉಪಯೋಗಿಸಬಹುದಾದ ತರಕಾರಿಗಳು: ಕ್ಯಾರೆಟ್, ಬೀಟ್ ರೂಟ್, ಗಡ್ಡೆಕೋಸು, ಮೂಲಂಗಿ, ಟೊಮೇಟೋ ಇತ್ಯಾದಿ

**ರಾತ್ರಿ :** ಹಸಿಯ ತರಕಾರಿಗಳ ಸಲಾಡ್, ಮಜ್ಜಿಗೆ, ಒಣಹಣ್ಣುಗಳು, ತಾಜಾ ಹಣ್ಣುಗಳು.

**ಎಚ್ಚರಿಕೆ :** ತೆಂಗಿನಕಾಯಿ, ಕಡ್ಲೆಕಾಯಿ, ಹಾಲು, ತುಪ್ಪ, ಬೆಣ್ಣೆ, ಎಣ್ಣೆ, ಬೇಳೆ ಇತ್ಯಾದಿಗಳು ಒಂದೆರಡು ತಿಂಗಳುಗಳ ಕಾಲ ಬೇಡ. ಸಾಧ್ಯವಾದಷ್ಟು ಹೆಚ್ಚು ನೀರನ್ನು ಕುಡಿಯಬೇಕು. ಅದಕ್ಕೆ ನಿಂಬೆಯ ರಸವನ್ನು ಹಾಕಿಕೊಳ್ಳಬಹುದು.

ಎನಿಮಾ, ಹೊಟ್ಟೆಗೆ ಬಿಸಿನೀರಿನ, ನಂತರ ತಣ್ಣೀರಿನ ಪಟ್ಟಿಗಳನ್ನು 30 ನಿಮಿಷಕಾಲ ಒಂದಾದ ನಂತರ ಮತ್ತೊಂದನ್ನು ಹಾಕಬೇಕು. ಮಣ್ಣುಪಟ್ಟಿಯನ್ನು ಹಾಕಬೇಕು. ನಾಲ್ಕು ಐದು ಗಂಟೆಗಳ ನಂತರ ಮತ್ತೆ ಹಾಕಬೇಕು. ಬಿಸಿನೀರಿನ ಹಿಪ್‌ಬಾತ್ ನಂತರ ತಣ್ಣೀರಿನ ಹಿಪ್‌ಬಾತ್ ಮಾಡಬೇಕು. ಹಬೆಸ್ನಾನ, ಸೂರ್ಯಸ್ನಾನ, ವಾಯುಸ್ನಾನ ಅವಶ್ಯ.

RNI No. 17139/69 "Siddaganga" Monthly - Postal Reg. No. L2/RNP/385/TMR/2012-14



ದೇವನಹಳ್ಳಿಯಲ್ಲಿ ಲೀನಾ ಮಲ್ಟಿಸ್ಪೆಷಾಲಿಟಿ ಆಸ್ಪತ್ರೆ ಪ್ರಾರಂಭೋತ್ಸವವನ್ನು ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರು ಉದ್ಘಾಟಿಸುತ್ತಿರುವುದು. ಮಾಲೀಕರಾದ ಡಾ॥ ಎನ್. ರಾಜಶೇಖರ್ ಮತ್ತು ಡಾ॥ ಶಶಿಕಲಾ ರಾಜಶೇಖರ್, ಸಾವಿತ್ರಿ ಶಂಕರ್ ಟ್ರಾನ್ಸ್‌ಪೋರ್ಟ್ ಮಾಲೀಕರಾದ ಶ್ರೀ ಉಮೇಶ್‌ರವರು ಉಪಸ್ಥಿತರಿದ್ದರು.



ವೈಶ್ಯ ಕೋ ಆಪರೇಟಿವ್ ಬ್ಯಾಂಕ್ ಲಿ., ತುಮಕೂರು – ಬಿ.ವಿ.ಕೆ. ಐಯ್ಯಂಗಾರ್ ರಸ್ತೆ ಶಾಖೆಯನ್ನು ನೂತನ ಕಟ್ಟಡಕ್ಕೆ ಸ್ಥಳಾಂತರಿದಾಗ ಶ್ರೀ ಸಿದ್ಧಗಂಗಾಮಠದ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ದೀಪ ಬೆಳಗಿಸುತ್ತಿರುವುದು. ಬ್ಯಾಂಕಿನ ಅಧ್ಯಕ್ಷರಾದ ಶ್ರೀ ಎಸ್.ಆರ್. ಶ್ರೀಧರಮೂರ್ತಿ ಮತ್ತು ಉಪಾಧ್ಯಕ್ಷರಾದ ಶ್ರೀ ಟಿ.ಜಿ. ಸತ್ಯನಾರಾಯಣ, ನಿರ್ದೇಶಕರುಗಳು ಉಪಸ್ಥಿತರಿದ್ದರು.




ವಿಶ್ವ ಹಿಂದೂ ಪರಿಷತ್ ಸಹಯೋಗದಲ್ಲಿ ಆಯೋಜಿಸಿದ್ದ ಸಂತ ಸಮ್ಮೇಳನದಲ್ಲಿ ಧರ್ಮಸ್ಥಳದ ಧರ್ಮಾಧಿಕಾರಿ ಡಾ॥ ವಿರೇಂದ್ರ ಹೆಗ್ಗಡೆಯವರು ಮಾತನಾಡುತ್ತಿರುವುದು.



ಶ್ರೀ ಸಿದ್ಧಗಂಗಾ ಮಠದಲ್ಲಿ 'ವಚನಪದಸಂಪದ' ನಿಘಂಟನ್ನು ಶ್ರೀ ಟಿ.ಆರ್. ಮಹಾದೇವಯ್ಯ ಸಂಪಾದಿಸಿರುವ ಪುಸ್ತಕವನ್ನು ಡಾ॥ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು ಅಮೃತಹಸ್ತದಿಂದ ಲೋಕಾರ್ಪಣೆ ಮಾಡಿದರು. ಪ್ರಕಾಶಕರಾದ ಡಾ. ಆರ್. ಶಿವಣ್ಣನವರು ಉಪಸ್ಥಿತರಿದ್ದರು.



ಸಂತ ಸಮ್ಮೇಳನದಲ್ಲಿ ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶ್ವತೀರ್ಥ ಮಹಾಸ್ವಾಮಿಗಳವರು ಮಾತನಾಡುತ್ತಿರುವುದು. ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರ ಮತ್ತು ಬೇಲಿಮಠದ ಪೂಜ್ಯ ಶ್ರೀ ಶ್ರೀ ಶಿವರುದ್ರ ಮಹಾಸ್ವಾಮಿಗಳವರ ಉಪಸ್ಥಿತಿ.




ಶ್ರೀ ಸಿದ್ಧಗಂಗಾಮಠದಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಬ್ಯಾಂಕ್‌ನ ನೂತನ ಶಾಖೆಯನ್ನು ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಅಮೃತಹಸ್ತದಿಂದ ಪ್ರಾರಂಭಿಸಲಾಯಿತು. ಜನರಲ್ ಮ್ಯಾನೇಜರ್ ಶ್ರೀ ನಾಗೇಶ್ವರರಾವ್, ಡೆಪ್ಯುಟಿ ಜನರಲ್ ಮ್ಯಾನೇಜರ್ ಶ್ರೀಮತಿ ಪಿ. ವಿಜಯಲಕ್ಷ್ಮಿ, ಎಜಿಎಂ ಶ್ರೀ ಕೃಷ್ಣಭಟ್ ಹಾಗೂ ಶಾಖಾ ವ್ಯವಸ್ಥಾಪಕರಾದ ಶ್ರೀ ಎಂ. ಪರಮಶಿವಯ್ಯ ಇವರು ಉಪಸ್ಥಿತರಿದ್ದರು.